ಪಂಚಾಯಿತಿಗಳಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳಿಗೆ ಎಲ್ಲಾ ಜಾತಿ ಮತ್ತು ಪ್ರವರ್ಗದ ಅಭ್ಯರ್ಥಿಗಳು ಸ್ಪರ್ಧಿಸಲು ಅವಕಾಶವನ್ನು ಕಲ್ಪಿಸುವುದಕ್ಕಾಗಿ ಹೊಸ ಗ್ರಾಮ ಪಂಚಾಯಿತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳನ್ನು ಸಾಮಾನ್ಯ ವರ್ಗದ ಹುದ್ದೆಗಳೆಂದು ಗುರುತಿಸುವಂತೆ ತಿಳಿಸಿರುತ್ತಾರೆ.

ಆದುದರಿಂದ, ಹೊಸದಾಗಿ ರಚಿತವಾಗಿರುವ ಗ್ರಾಮ ಪಂಚಾಯಿತಿಗಳಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳಿಗೆ ಮೀಸಲಾತಿ ನಿಗದಿಪಡಿಸುವ ಬಗ್ಗೆ ಈ ಕೆಳಕಂಡಂತೆ ಆದೇಶಿಸಿದೆ.

**ರಾಜ್ಯ ಚುನಾವಣಾ ಆಯೋಗದ ಆದೇಶ ಸಂಖ್ಯೆ: ರಾಚುಆ 170 ಇಜಿಪಿ 2015,**
**ಬೆಂಗಳೂರು, ದಿನಾಂಕ: 18–11–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, 2015ರ ಗ್ರಾಮ ಪಂಚಾಯಿತಿ ಸಾರ್ವತ್ರಿಕ ಚುನಾವಣೆ ನಂತರ ಹೊಸದಾಗಿ ರಚಿತವಾಗಿರುವ ಹಾಗೂ ಇನ್ನು ಮುಂದೆ ರಚಿತವಾಗಬಹುದಾದ ಗ್ರಾಮ ಪಂಚಾಯಿತಿಗಳಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳನ್ನು "ಸಾಮಾನ್ಯ" ವರ್ಗದ ಹುದ್ದೆಗಳೆಂದು ನಿಗದಿಪಡಿಸಿ ಅಧಿಸೂಚಿಸುವಂತೆ ಆದೇಶಿಸಿದೆ.

ಆದೇಶಾನುಸಾರ

**ಆರ್. ಚಂದ್ರಶೇಖರ್**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೪) (50 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– III | ಬೆಂಗಳೂರು, ಶನಿವಾರ, ನವೆಂಬರ್ ೨೧, ೨೦೧೫ (ಕಾರ್ತೀಕ ೩೦, ಶಕ ವರ್ಷ ೧೯೩೭) | ನಂ. ೧೩೯೯ |
|---|---|---|
| Part– III | Bengaluru, Saturday, November 21, 2015 (Kartheeka 30, Shaka Varsha 1937) | No. 1399 |

ಜಿಲ್ಲಾಧಿಕಾರಿಯವರ ಕಾರ್ಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಅಧಿಸೂಚನೆ

**ಸಂ: ಇಎಲ್ಎನ್(ಪಂ)(ಎ.ಪಿ.ಎಂ.ಸಿ)ಸಿಆರ್/21/2014–15, ದಿನಾಂಕ: 20/11/2015**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ನಿಯಮಗಳು 1968 ಹಾಗೂ ತಿದ್ದುಪಡಿ ನಿಯಮಗಳು 2002ರ ನಿಯಮ 6ಕ್ಕೆ ಅನುಸಾರವಾಗಿ ಈ ಕಛೇರಿಯಿಂದ ಹೊರಡಿಸಿರುವ ದಿನಾಂಕ:28/10/2015 ರ ಅಧಿಸೂಚನೆ ಸಂ: ಇಎಲ್ಎನ್(ಪಂ)(ಎ.ಪಿ.ಎಂ.ಸಿ)ಸಿಆರ್ 21/2014–15 ಪ್ರಕಾರ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಸ್ಥಾನಗಳಿಗೆ ಚುನಾಯಿತರಾಗಿ ಆಯ್ಕೆಯಾಗಿರುವ ಅಭ್ಯರ್ಥಿಗಳ ಹೆಸರುಗಳನ್ನು ಚುನಾವಣಾಧಿಕಾರಿಗಳು ದಿನಾಂಕ: 19/11/2015ರಂದು ಘೋಷಿಸಿರುತ್ತಾರೆ.

ಅದರಂತೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಪ್ರಕರಣ 27ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿ ಎಸ್.ಪಾಲಯ್ಯ, ಭಾ.ಆ.ಸೇ. ಆದ ನಾನು ಹೊಸಕೋಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಚುನಾಯಿತರಾಗಿ ಆಯ್ಕೆಯಾಗಿರುವ ಕೆಳಕಂಡ ಸದಸ್ಯರ ಹೆಸರುಗಳನ್ನು ಅಧಿಸೂಚಿಸಿದೆ.

| ಕ್ರ. ಸಂ | ಕ್ಷೇತ್ರದ ಹೆಸರು | ಮೀಸಲಾತಿ ವಿವರ | ಚುನಾಯಿತರಾದವರ ಸದಸ್ಯರ ಹೆಸರು ಮತ್ತು ವಿಳಾಸ |
|---|---|---|---|
| 1 | ಸೂಲಿಬೆಲೆ | ಸಾಮಾನ್ಯ | ಶ್ರೀ.ಶಿವಪ್ಪ. ಅರಸನಹಳ್ಳಿಗ್ರಾಮ, ಸೂಲಿಬೆಲೆ ಹೋಬಳಿ, ಹೊಸಕೋಟೆ ಅಂಚೆ, ಹೊಸಕೋಟೆ |
| 2 | ಕಂಬಳೀಪುರ | ಪರಿಶಿಷ್ಟ ಜಾತಿ. | ಶ್ರೀ.ಡಿ.ಟಿ.ವೆಂಕಟೇಶ್. ದೊಡ್ಡರಳಗೆರೆ ಗ್ರಾಮ, ಬೆಂಡಿಗಾನಹಳ್ಳಿ ಅಂಚೆ, ಹೊಸಕೋಟೆ ತಾಲ್ಲೂಕು. |
| 3 | ಕುಂಬಳಹಳ್ಳಿ | ಸಾಮಾನ್ಯ | ಶ್ರೀ.ಕೆ.ಸತೀಶ್. ಚಿಕ್ಕಹುಲ್ಲೂರು ಗ್ರಾಮ, ಕಸಬಾ ಹೋಬಳಿ, ಹೊಸಕೋಟೆ ತಾಲ್ಲೂಕು. |
| 4 | ಹೊಸಕೋಟೆ | ಪರಿಶಿಷ್ಟ ಪಂಗಡ | ಶ್ರೀ.ಶ್ರೀರಾಮಪ್ಪ. ಹಳೇಯೂರು ಗ್ರಾಮ, ನಂದಗುಡಿ ಹೋಬಳಿ, ಹೊಸಕೋಟೆ ತಾಲ್ಲೂಕು. |
| 5 | ಅನುಗೊಂಡನಹಳ್ಳಿ | ಸಾಮಾನ್ಯ | ಶ್ರೀ.ಹೆಚ್.ಕೆ.ದೇವರಾಜ್. ಹಾರೋಹಳ್ಳಿ ಗ್ರಾಮ, ಅನುಗೊಂಡನಹಳ್ಳಿ ಹೋಬಳಿ, ಹೊಸಕೋಟೆ ತಾಲ್ಲೂಕು. |

| ಕ್ರ. ಸಂ | ಕ್ಷೇತ್ರದ ಹೆಸರು | ಮೀಸಲಾತಿ ವಿವರ | ಚುನಾಯಿತರಾದವರ ಸದಸ್ಯರ ಹೆಸರು ಮತ್ತು ವಿಳಾಸ |
|---|---|---|---|
| 6 | ಗಣಗಲೂರು | ಹಿಂದುಳಿದ ವರ್ಗ 'ಅ' | ಶ್ರೀ.ಕೆ.ಆರ್.ಶಿವಕುಮಾರ್. ಕಲ್ಕುಂಟೆ ಅಗ್ರಹಾರ ಗ್ರಾಮ, ಅನುಗೊಂಡನಹಳ್ಳಿ ಹೋಬಳಿ, ಹೊಸಕೋಟೆ ತಾಲ್ಲೂಕು. |
| 7 | ವಾಗಟ | ಸಾಮಾನ್ಯ | ಶ್ರೀ.ಕೆ.ಮುನಿರಾಜು. ಮಾಕನಹಳ್ಳಿ ಗ್ರಾಮ, ಜಡಿಗೇನಹಳ್ಳಿ ಹೋಬಳಿ, ಹೊಸಕೋಟೆ ತಾಲ್ಲೂಕು. |
| 8 | ಜಡಿಗೇನಹಳ್ಳಿ | ಹಿಂದುಳಿದ ವರ್ಗ 'ಬ' | ಶ್ರೀ.ಕೆ.ಬಿ.ಆಂಜಿನಪ್ಪ. ಕೊಳತೂರು ಗ್ರಾಮ, ಕಸಬಾ ಹೋಬಳಿ, ಹೊಸಕೋಟೆ ತಾಲ್ಲೂಕು. |
| 9 | ತಾವರೆಕೆರೆ | ಸಾಮಾನ್ಯ | ಶ್ರೀ.ಎಂ.ದೇವರಾಜ್. ಯಲಚಹಳ್ಳಿ ಗ್ರಾಮ, ನಂದಗುಡಿ ಹೋಬಳಿ, ಹೊಸಕೋಟೆ ತಾಲ್ಲೂಕು. |
| 10 | ಶಿವನಾಪುರ | ಮಹಿಳೆ | ಶ್ರೀಮತಿ.ಕಾಂತಮ್ಮ (ಎಸ್.ಟಿ.ಎಂ) ಕೆ.ಸತ್ಯವಾರ ಗ್ರಾಮ ಮತ್ತು ಅಂಚೆ, ನಂದಗುಡಿ ಹೋಬಳಿ, ಹೊಸಕೋಟೆ ತಾಲ್ಲೂಕು. |
| 11 | ನಂದಗುಡಿ | ಸಾಮಾನ್ಯ | ಶ್ರೀ.ಹೆಚ್.ಎಸ್.ಧರ್ಮೇಶ್. ಕೊಂಡರಹಳ್ಳಿ ಗ್ರಾಮ, ನಂದಗುಡಿ ಹೋಬಳಿ, ಹೊಸಕೋಟೆ ತಾಲ್ಲೂಕು. |
| 12 | ವರ್ತಕರ ಕ್ಷೇತ್ರ | ಸಾಮಾನ್ಯ | ಶ್ರೀ.ಜೆ.ವಿ.ರವಿಶಂಕರ್. (ಅವಿರೋದ ಆಯ್ಕೆ) ಶ್ರೀ.ವಿಜಯಾ ಪ್ರಾವಿಷನ್ಸ್ ಸ್ಟೋರ್ಸ್, ಮಾರುಕಟ್ಟೆ ರಸ್ತೆ, ಹೊಸಕೋಟೆ. |
| 13 | ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘಗಳ ಕ್ಷೇತ್ರ. | ಸಾಮಾನ್ಯ | ಶ್ರೀ.ಸಿ.ಮುನಿಯಪ್ಪ. (ಅವಿರೋದ ಆಯ್ಕೆ) ಮುದ್ದೇಗೌಡ ಬಡಾವಣೆ, ಉಪ್ಪಾರಹಳ್ಳಿ ಗ್ರಾಮ, ಕಸಬಾ ಹೋಬಳಿ, ಹೊಸಕೋಟೆ ತಾಲ್ಲೂಕು. |

**ಎಸ್. ಪಾಲಯ್ಯ**
ಜಿಲ್ಲಾಧಿಕಾರಿ
ಬೆಂಗಳೂರು ಗ್ರಾಮಾಂತರ ಜಿಲ್ಲೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (100 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ– II | ಬೆಂಗಳೂರು, ಶನಿವಾರ, ನವೆಂಬರ್ ೨೧, ೨೦೧೫ (ಕಾರ್ತೀಕ ೩೦, ಶಕ ವರ್ಷ ೧೯೩೭) | ನಂ. ೧೪೦೦ |
|---|---|---|
| Part– II | Bengaluru, Saturday, November 21, 2015 (Kartheeka 30, Shaka Varsha 1937) | No. 1400 |



ಕರ್ನಾಟಕ ವಿಧಾನಸಭೆ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ಕವಿಸಸ/ಆ–1/35/ಎಫ್.ಪಿ.ಪಿ/2002, ಬೆಂಗಳೂರು, ದಿನಾಂಕ: 04–11–2015**

**ವಿಷಯ** : ಕರ್ನಾಟಕ ವಿಧಾನಸಭೆ ಸಚಿವಾಲಯದ ಅಪರ ಕಾರ್ಯದರ್ಶಿ ಹುದ್ದೆಗೆ ಮುಂಬಡ್ತಿ ನೀಡುವ ಬಗ್ಗೆ.

2003ರ ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿಗಳು, ನಿಯಮ 6(i)ರ ಪ್ರಕಾರ ಹಾಗೂ 1977ರ ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 19(3)(ಎ)ನ್ನು ಓದಿಕೊಂಡಂತೆ ಈ ಸಚಿವಾಲಯದಲ್ಲಿ ಜಂಟಿ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್.ವೈ. ಕುಳಗೇರಿ ಇವರಿಗೆ ದಿನಾಂಕ: 02.11.2015ರಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ. 52,500–1350–60,600–1500–69,600–1700–73,000 ರಲ್ಲಿ ಅಪರ ಕಾರ್ಯದರ್ಶಿ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ.

ವಿಶೇಷ ಮಂಡಳಿಯ ಆದೇಶಾನುಸಾರ,

**ಹೆಚ್.ಎಸ್. ಕಸ್ತೂರಿ**
ಅಧೀನ ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ ಸಚಿವಾಲಯ

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– IV-A | ಬೆಂಗಳೂರು, ಶನಿವಾರ, ನವೆಂಬರ್ ೨೧, ೨೦೧೫ (ಕಾರ್ತೀಕ ೩೦, ಶಕ ವರ್ಷ ೧೯೩೭) | ನಂ. ೧೪೦೧ |
| Part– IV-A | Bengaluru, Saturday, November 21, 2015 (Kartheeka 30, Shaka Varsha 1937) | No. 1401 |


***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/QB/483/PMBR/2015, Bengaluru, Dated: 19.11.2015***

The following Private Member Bill was introduced in Legislative Assembly on 19-11-2015

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನಸಭೆ**

**ಎಂಟನೇ ಅಧಿವೇಶನ**

**(ಮುಂದುವರೆದ ಉಪವೇಶನಗಳು)**

**ಕರ್ನಾಟಕ ಭೂ ಕಂದಾಯ (ಖಾಸಗಿ ಸದಸ್ಯರ ತಿದ್ದುಪಡಿ) ವಿಧೇಯಕ, 2015**

**(2015ರ ಖಾಸಗಿ ಸದಸ್ಯರ ವಿಧೇಯಕ–02)**

ಗೊಲ್ಲರ ಹಟ್ಟಿಗಳು, ಲಂಬಾಣಿ ತಾಂಡಗಳು, ಹಾಡಿಗಳು, ಶಿಬಿರ (ಕ್ಯಾಂಪು) ಗಳು, ಕಾಲೋನಿಗಳು ಮತ್ತು ವಾಡಿಗಳು, ದೊಡ್ಡಿಗಳನ್ನು ಒಳಗೊಂಡಂತೆ ಮತ್ತು ಅರಣ್ಯ, ಕಂದಾಯ, ಅಬಕಾರಿ ಮತ್ತು ಖಾಸಗಿ ಇನಾಮು ಭೂಮಿಗಳಲ್ಲಿರುವ ಆದರೆ ಗ್ರಾಮಗಳೆಂದು ದಾಖಲಾಗಿರದ ಸಾಮಾಜಿಕ ವಾಸಸ್ಥಾನಗಳನ್ನು ಕಂದಾಯ ಗ್ರಾಮಗಳೆಂದು ವಿನಿಯಮಿಸುವುದು ಯುಕ್ತವಾಗಿರುವುದರಿಂದ ಮತ್ತು ಇಲ್ಲಿ ಇನ್ನು ಮುಂದೆ ಕಂಡುಬರುವ ಕೆಲವು ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕೆ ಒಂದು ವಿಧೇಯಕ.

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಗಿನಂತೆ ಅಧಿನಿಯಮಿತವಾಗುವುದು:–

1. **ಚಿಕ್ಕ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಭೂ ಕಂದಾಯ (ಖಾಸಗಿ ಸದಸ್ಯರ ತಿದ್ದುಪಡಿ) ಅಧಿನಿಯಮ, 2015 ಎಂದು ಕರೆಯತಕ್ಕದ್ದು.

(2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗುತ್ತದೆ.

(3) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

(4) ಅಧಿನಿಯಮದ ಈ ಉಪಬಂಧವು, ಈ ಅನುಸೂಚಿತ ಪ್ರದೇಶಗಳು ವಿವಿಧ ಅಧಿನಿಯಮಗಳಲ್ಲಿ ಒಳಗೊಂಡಿರುವ ರಾಜ್ಯದ ಪ್ರದೇಶಗಳಿಗೆ ಅನ್ವಯವಾಗತಕ್ಕದ್ದು.

2. **ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ತಿದ್ದುಪಡಿ.–** ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ ಸಂ.12) 2ನೇ ಪ್ರಕರಣದ (38)ನೇ ಖಂಡಕ್ಕೆ ಬದಲಾಗಿ ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ,–

"(38) 'ಗ್ರಾಮ' ಎಂದರೆ ಭೂ ದಾಖಲೆಗಳಲ್ಲಿ ಗುರುತಿಸಿರುವ ಸ್ಥಳೀಯ ಪ್ರದೇಶಗಳು ಮತ್ತು ಪಟ್ಟಣ ಅಥವಾ ನಗರ ಮತ್ತು ಗ್ರಾಮ, ಪಟ್ಟಣ ಅಥವಾ ನಗರದ ವ್ಯಾಪ್ತಿಯೊಳಗೆ ಸೇರಿರುವ ಎಲ್ಲಾ ಭೂ ಪ್ರದೇಶವನ್ನು ಒಳಗೊಂಡು ರೆವಿನ್ಯೂ ಆಡಳಿತದ ಗ್ರಾಮವಾಗಿ ಸೇರಿಕೊಂಡಿರುವ ಭೂ ದಾಖಲೆಗಳಲ್ಲಿ ದಾಖಲಿಸದ ಗೊಲ್ಲರ ಹಟ್ಟಿಗಳು, ಲಂಬಾಣಿ ತಾಂಡಾಗಳು, ಕಾಲೋನಿಗಳು ಹಾಡಿಗಳು ಮತ್ತು ಶಿಬಿರಗಳು, ದೊಡ್ಡಿಗಳು ಮತ್ತು ಅಂಥ ಇತರ ಸಾಮಾಜಿಕ ವಸಾಹತು ಮತ್ತು ವಾಸಸ್ಥಾನಗಳು ವಾಸಸ್ಥಾನಗಳ ಅಕ್ಕಪಕ್ಕದ ಪ್ರದೇಶಗಳು, ಪಟ್ಟಣ ಅಥವಾ ನಗರ ಹಾಗೂ ಗ್ರಾಮ, ಪಟ್ಟಣ ಅಥವಾ ನಗರದ ಮಿತಿಗಳೊಳಗೆ ಒಳಗೊಳ್ಳುವ ಎಲ್ಲಾ ಭೂಮಿಗಳನ್ನು ಒಳಗೊಳ್ಳುತ್ತದೆ."

### ಉದ್ದೇಶಗಳು ಮತ್ತು ಕಾರಣಗಳು

ದಾಖಲು ಮಾಡಿರದ, ನೋಂದಣಿಯಾಗದ, ಘೋಷಣೆಯಾಗದ, ಅಧಿಸೂಚಿತ–ಮುಕ್ತ (ಡಿನೋಟಿಫೈ), ಮೀಸಲಿರಿಸದ, ಮೋಜಣಿ (ಸರ್ವೆ) ಮಾಡದ, ಸಂಖ್ಯೆ ನೀಡದ, ಗುರುತಿಸಲ್ಪಡದ, ಬಡವರು ವಾಸಿಸುವ ಅನುಸೂಚಿತ ಜಾತಿ / ಅನುಸೂಚಿತ ಪಂಗಡ ಮತ್ತು ಇತರ ದಬ್ಬಾಳಿಕೆಗೆ ಒಳಗಾದವರು ವಾಸಿಸುವ ಪ್ರದೇಶಗಳನ್ನು ಘೋಷಣೆ ರೂಪದಲ್ಲಿ ಸರ್ಕಾರದ ಸರಿಯಾದ ದಾಖಲೆಗಳ ಒಳಗೆ ತರಬೇಕಾಗುತ್ತದೆ. ಕಂದಾಯ (ರೆವಿನ್ಯೂ) ಗ್ರಾಮವು ನಿಧಿ ಪಡೆಯುವ, ಹಂಚುವ, ಯೋಜನೆ ರೂಪಿಸುವ ಹಾಗೂ ಸ್ಕೀಮುಗಳನ್ನು ಕಾರ್ಯರೂಪಕ್ಕೆ ತರಲು ಹಂಚಿಕೆ ಮಾಡುವ ಘಟಕವಾಗಿರುತ್ತದೆ. ಆದರೆ, ಕಂದಾಯೇತರ ಗ್ರಾಮಗಳು ಕಾನೂನುಬದ್ಧ ಅಧಿಪತ್ಯ ಮತ್ತು ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ. ಹಟ್ಟಿಗಳು, ಹಾಡಿಗಳು, ತಾಂಡಾಗಳು, ವಾಡಿಗಳು, ಶಿಬಿರಗಳು, ಕಾಲೋನಿಗಳು, ದೊಡ್ಡಿಗಳ ದೈನಂದಿನ ಜೀವನೋಪಾಯಕ್ಕಾಗಿ ಸಾಂಪ್ರದಾಯಿತ ಕರಕುಶಲ ಮತ್ತು ಭೂ ಸಂಬಂಧಿತ ಕಾರ್ಯಚಟುವಟಿಕೆಗಳಲ್ಲಿ ತೊಡಗಿರುತ್ತವೆ. ಈ ವಾಸಸ್ಥಾನಗಳು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ (5)ರ ಪ್ರಕರಣದ ಮೇರೆಗೆ ರೆವಿನ್ಯೂ ಗ್ರಾಮಗಳೆಂದು ಪರಿಗಣಿಸಲು ರೆವಿನ್ಯೂ ದಾಖಲೆಗಳನ್ನು ಹೊಂದಿರುವುದಿಲ್ಲ.

ಇವುಗಳಲ್ಲಿ ಅರಣ್ಯ, ಖಾಸಗಿ ಇನಾಮು, ಅಬಕಾರಿ, ದೇವಸ್ಥಾನ, ಗ್ರಾಮ ಠಾಣಾ ಮತ್ತು ಅಂಥ ಇತರ ಭೂಮಿಗಳ ಮೇಲೆ ಆಧಾರಿತವಾಗಿದ್ದು, ತಮ್ಮ ಹಕ್ಕುಗಳನ್ನು ಸಮರ್ಥಿಸಲು ಮತ್ತು ದಾಖಲೆಗೆ ತರಲು ಪ್ರದೇಶ, ಸ್ವಾಧೀನತೆ, ಮನೆ, ನಿವೇಶನಗಳು ಮತ್ತು ಇತರ ಮೂಲಗಳ ಹಕ್ಕುಗಳನ್ನು ಅವರು ಹೊಂದಿರುವುದಿಲ್ಲ. ಅದನ್ನು ಅಧಿನಿಯಮಿತಗೊಳಿಸುವ ಸಲುವಾಗಿ ಸೂಕ್ತ ವಿಧೇಯಕವನ್ನು ಮಂಡಿಸಬೇಕಾಗುತ್ತದೆ. ಇದರಿಂದ, ದೂರದ, ಗುಡ್ಡಗಾಡು, ಅರಣ್ಯ, ಹಿಂದುಳಿದ ಪ್ರದೇಶಗಳಿಗೆ ಜೀವನೋಪಾಯದ ಹಕ್ಕು, ವ್ಯವಹರಣೆಯ ಹಕ್ಕು ಮತ್ತು ಅಂಥ ಇತರ ಪ್ರಯೋಜನಗಳನ್ನು ಅಪ್‌ಲೋಡ್ ಮಾಡಲು ಸಹಾಯಕವಾಗುತ್ತದೆ.

### ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ವಿಧೇಯಕವು ಯಾವುದೇ ಆರ್ಥಿಕ ವೆಚ್ಚವನ್ನು ಒಳಗೊಂಡಿರುವುದಿಲ್ಲ ಮತ್ತು ಸರ್ಕಾರದ ಬೊಕ್ಕಸಕ್ಕೆ ಹೊರೆಯಾಗುವುದಿಲ್ಲ.

**ಕೆ.ಶಿವಮೂರ್ತಿ**
ವಿಧಾನ ಸಭಾ ಸದಸ್ಯರು

**ಎಸ್.ವೈ.ಕುಳಗೇರಿ,**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನ ಸಭೆ.

**KARNATAKA LEGISLATIVE ASSEMBLY**

**FOURTEENTH LEGISLATIVE ASSEMBLY**

**EIGHTH SESSION**

**(Adjourned Meetings)**

## KARNATAKA LAND REVENUE (PRIVATE MEMBER AMENDMENT) BILL, 2015

**(Private Member Bill No.2 of 2015)**

A Bill to regulate the Revenue Village including Gollara Hatties, Lambani Tandas, Haddis camp of colonies and Wadies, Doddies Such other social settlement habitats which are not recorded as a villages which are in Forest, Revenue, Excise and Private Inam Lands whereas it is expedient and for certain others matters herein after appearing:-

Be it an enacted by the Karnataka State Legislature in the sixty sixth year of the Republic of India as follows:-

**1. Short Title and Commencement.-** (1) This act may be called the Karnataka Land Revenue (Private Member Amendment) Act, 2015.

(2) It extends to the whole of the State of Karnataka.

(3) It shall come into force at once.

(4) This provision of the Act shall be applicable to the areas of the State in which these scheduled areas included in the various Acts.

**2. Amendment of Karnataka Land Revenue Act 1964.-** In the Karnataka Land Revenue Act, 1964 (Karnataka Act No.12 of 1964), in the section 2 for clause (38), the following shall be substituted namely:-

"(38) 'Village' means a local areas which is recognized in the Land records and the Gollara Hatties, Lambani Tandas, Haddis camp of colonies and Wadies, Doddies such other social settlement habitats which are not recorded in the Lands records are comprises as a Village for purposes of Revenue Administration and Adjacent areas of inhabitats includes Town or City and all the land comprises within the limits of a Village, Town or City."

## STATEMENT OF OBJECTS AND REASONS

Unrecorded, unregistered, undeclared, denotified, dereserved, non surveyed, unnumbered, unidentified, area of living poor, SC/ST and other downtrodden habitations, has to be brought into right records of the Government in the form of declaration. Revenue village as a unit to allocate funding, planning, execution of schemes, but non revenue villages will lose the legal domain and entities. The Hattis, Haddis, Thandas, Wadis, Camps, Colonies, Doddis traditionally crafts and Agrarian activity involved for the day to day way of life. These settlements do not have a revenue records to consider as a revenue village under section(5) of the Karnataka Land Revenue Act, 1964.

These are based in the Forest, Private inaam, excise, temple, grama taana and such other lands, but they do not have rights of area, occupancy, house, sites and other sources to confirm their rights, brought to records and appropriate bill should be introduced for enactment. It helps to upload right to lively hood, right to transaction and other such benefits to the remote, hilly, forest, backward areas.

## FINANCIAL MEMORANDUM

The proposed bill will not have any financial expenditure and not burden to the Government exchequer.

**K. SHIVAMURTHY**
MEMBER OF LEGISLATIVE ASSEMBLY

**S.Y. KULAGERI**
SECRETARY(I/C)
KARNATAKA LEGISLATIVE ASSEMBLY

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (125 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ– *IV-A* | ಬೆಂಗಳೂರು, ಶನಿವಾರ, ನವೆಂಬರ್ ೨೧, ೨೦೧೫ (ಕಾರ್ತೀಕ ೩೦, ಶಕ ವರ್ಷ ೧೯೩೭) | ನಂ. ೧೪೦೨ |
| *Part– IV-A* | *Bengaluru, Saturday, November 21, 2015 (Kartheeka 30, Shaka Varsha 1937)* | *No. 1402* |


## *KARNATAKA LEGISLATIVE ASSEMBLY SECRETARIAT*
## *NOTIFICATION*
### *No. KLA/QB/483/PMBR/2015, Bengaluru, Dated: 19.11.2015*

The following Private Member Bill was introduced in Legislative Assembly on 19-11-2015

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನಸಭೆ**

**ಎಂಟನೇ ಅಧಿವೇಶನ**

**(ಮುಂದುವರೆದ ಉಪವೇಶನಗಳು)**

**ಕರ್ನಾಟಕ ರಾಜ್ಯ ವಿವಾಹ ವಿಧಿವಿಧಾನಗಳ ನಿಯಂತ್ರಣ ವಿಧೇಯಕ–2015**

**(2015ರ ಖಾಸಗಿ ಸದಸ್ಯರ ವಿಧೇಯಕ ಸಂಖ್ಯೆ–01)**

ಇತಿಹಾಸದಲ್ಲಿ ವಿವಾಹಗಳಿಗೆ ಒಂದು ವಿಶೇಷ ಸ್ಥಾನವಿದೆ. ಆಶ್ಚರ್ಯವಾದುದಾದರೂ ಸತ್ಯವೇನೆಂದರೆ, ವಿವಾಹದ ಪರಿಕಲ್ಪನೆ, ಎಲ್ಲಾ ನಾಗರೀಕತೆಗಳಲ್ಲೂ ಸ್ವತಂತ್ರವಾಗಿ ಹೊರಹೊಮ್ಮಿದ್ದು, ಅನಾದಿಕಾಲದಿಂದ ಇಲ್ಲಿಯವರೆಗೂ ಸತತವಾದ ವ್ಯವಸ್ಥೆಯಾಗಿ ಆಚರಿಸಲ್ಪಡುತ್ತದೆ.

ಒಂದು ವಿಭಿನ್ನವಾದ ಅಂಶವೆಂದರೆ, ಆಯಾ ಸಮುದಾಯ ಅಥವಾ ಧರ್ಮಗಳಿಗನುಸಾರವಾಗಿ ವಿವಾಹಗಳ ವಿಧಿವಿಧಾನಗಳನ್ನು ರೂಪಿಸಲಾಗಿದೆ. ಆದರೂ ಸಹ ಎಲ್ಲಾ ತರಹದ ವಿವಾಹಗಳನ್ನು ಒಂದಾಗಿ ಗುರುತಿಸುವ ಎಳೆಯೆಂದರೆ ಒಂದು ಗಂಡು ಮತ್ತು ಒಂದು ಹೆಣ್ಣು ಸಮಾಜದ ಹಾಗೂ ಧರ್ಮದ ಚೌಕಟ್ಟಿನಲ್ಲಿ ಒಂದುಗೂಡಿ ಸಂಸಾರ ನಡೆಸುವ ಪ್ರಕ್ರಿಯೆ ಎಂದು ಹೇಳಬಹುದು. ಈ ನಿಟ್ಟಿನಲ್ಲಿ ಅರ್ಥೈಸಿದಾಗ ವಿವಾಹವೆಂಬ ವ್ಯವಸ್ಥೆ ಅಥವಾ ಸಂಸ್ಥೆ ಸಮಾಜದ ಒಂದು ಮೂಲಭೂತ ಅಂಗವಾಗಿ ಮುಂದುವರೆದೂ ಸಮಾಜದ ಭದ್ರಬುನಾದಿಯಾಗಿ ರೂಪಿತಗೊಂಡಿರುವುದನ್ನು ಮನಗಾಣಬಹುದು.

ಯಾವುದೇ ಸಮುದಾಯದ ಅಥವಾ ಧರ್ಮದ ವಿವಾಹದಲ್ಲಿ ಅದರ ವಿಧಿವಿಧಾನಗಳು ಹಾಗೂ ಸಂಭ್ರಮಗಳು ದಂಪತಿಗಳ ನಿರಾತಂಕ ಸಹಬಾಳ್ವೆಗೆ ಪೂರಕವಾಗಿಯೇ ರೂಪಿತಗೊಂಡಿರುತ್ತದೆ. ಇಲ್ಲಿ ಸಂಪ್ರದಾಯ ಹಾಗೂ ದಂಪತಿಗಳ ಸಹಬಾಳ್ವೆಗೆ ಪೂರಕವಾದ ಭದ್ರಬುನಾದಿಯೇ ಮೂಲೋದ್ದೇಶವಾಗಿರುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ಈ ಚಿತ್ರಣ ಪೂರ್ಣವಾಗಿ ವಿಕಾರವಾಗಿದ್ದು, ವಿವಾಹಗಳು ಆಡಂಬರ, ಡಂಭಾಚಾರ ಹಾಗೂ ಐಶ್ವರ್ಯದ ಪ್ರದರ್ಶನಗಳ ಪ್ರತಿಬಿಂಬವಾಗಿ ಆಚರಿಸಲ್ಪಡುತ್ತಿದೆ. ಉಳ್ಳವರ ದರ್ಪ ಹಾಗೂ ಅಹಂಕಾರದ ಪ್ರತೀಕವಾಗಿ ಆಚರಿಸುವ ಈ ಪ್ರವೃತ್ತಿ ಸಮಾಜದಲ್ಲಿ ಶೋಷಿತರ ಹಾಗೂ ಬಡವರ ಮನಸ್ಸಿನ ಮೇಲಾಗುವ ಆಘಾತಕಾರಿ ಪರಿಣಾಮಗಳ ಬಗ್ಗೆ ಕಿಂಚಿತ್ತೂ ಕಾಳಜಿ ಇಲ್ಲದ ಮೃಗೀಯ ಭಾವವನ್ನು ಬಿಂಬಿಸುತ್ತದೆ. ಮೇಲಾಗಿ, ಈ ಪ್ರವೃತ್ತಿ ಸಮಾಜಘಾತಕ ಶಕ್ತಿಗಳು, ಭ್ರಷ್ಟರಾಜಕಾರಣಿಗಳು, ನವ್ಯ ಶ್ರೀಮಂತರು ಹಾಗೂ ನೀತಿಗೆಟ್ಟ ಅಧಿಕಾರವರ್ಗದವರು ತಮ್ಮ ಸ್ವಂತ ಹಿತಾಸಕ್ತಿಯ ಬೇಳೆ ಬೇಯಿಸಿಕೊಳ್ಳಲು ಒಂದು ಅವಕಾಶವನ್ನಾಗಿ ಮಾರ್ಪಡಿಸಿಕೊಳ್ಳುವ ಕುತಂತ್ರವನ್ನು ಮನಗಾಣಬೇಕಿದೆ. ಈ ನಿಟ್ಟಿನಲ್ಲಿ ನೋಡಿದಾಗ ಸರ್ಕಾರ ಅಸಹಾಯಕ/ಮೂಕ ಪ್ರೇಕ್ಷಕವಾಗಿ ಮುಂದುವರೆಯುವುದು ಸಮಾಜದ ಬುನಾದಿಗೆ ಅಪಾಯಕಾರಿಯಾಗುವ ಲಕ್ಷಣಗಳಿವೆ. ಆದ್ದರಿಂದ, ಸರ್ಕಾರ ಮಧ್ಯ ಪ್ರವೇಶಿಸಿ ಸೂಕ್ತ ಕ್ರಮ ಜರುಗಿಸುವುದು ಅತ್ಯವಶ್ಯಕವಾಗಿರುತ್ತದೆ.

ಇದು ಭಾರತದ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:–**

(i) ಕರ್ನಾಟಕ ರಾಜ್ಯ ವಿವಾಹ ವಿಧಿವಿಧಾನಗಳ ನಿಯಂತ್ರಣ ವಿಧೇಯಕ –2015

(ii) ಇದು ತಕ್ಷಣದಿಂದಲೇ ಜಾರಿಯಾಗುತ್ತದೆ.

**2. ಪರಿಭಾಷೆಗಳು (Definitions):–**

(ಅ) ‘ವಿವಾಹ’ ಎಂದರೆ ಹಿಂದೂ ವಿವಾಹಗಳ ವಿಧೇಯಕ 1955 ಮತ್ತು ವಿಶೇಷ ವಿವಾಹಗಳ ವಿಧೇಯಕ 1954 ಹಾಗೂ ಇತರೆ ಇನ್ನಾವುದೇ ವಿಧಿವಿಧಾನಗಳ ಅನ್ವಯ ಒಂದು ಹೆಣ್ಣು ಹಾಗೂ ಒಂದು ಗಂಡು ದಂಪತಿಗಳೆಂದು ಪರಿಗಣಿಸಲ್ಪಡಿಸಿದ್ದರೆ.

(ಆ) ‘ಆಮಂತ್ರಕರು’ ಎಂದರೆ ಮದುವೆಯಾಗುವ ಗಂಡು ಹೆಣ್ಣಿನ ಪೋಷಕರು, ಮಿತ್ರರು, ಬಂಧುವರ್ಗದವರು ಹಾಗೂ ಇನ್ನಿತರ ಅತಿಥಿಗಳು.

(ಇ) ‘ವಿವಾಹ ಸಭಾಂಗಣ’ ಎಂದರೆ ಛತ್ರ, ಹೋಟೆಲ್ ಮತ್ತು ವಿವಾಹಕೋಸ್ಕರ ಆಯೋಜಿಸಿದ ಇನ್ನಾವುದೇ ನಿವೇಶನ ಅಥವಾ ತಾತ್ಕಾಲಿಕ ವೇದಿಕೆ.

(ಈ) ‘ಸ್ಥಳೀಯ ಸಂಸ್ಥೆ’(Local Body) ಎಂದರೆ ಗ್ರಾಮಪಂಚಾಯಿತಿ/ಪಟ್ಟಣ ಪಂಚಾಯಿತಿ/ಪುರಸಭೆ/ ನಗರಸಭೆ/ ಮಹಾನಗರ ಪಾಲಿಕೆ/ ಬೃಹತ್ ಮಹಾನಗರ ಪಾಲಿಕೆ/ ಕರ್ನಾಟಕ ಗ್ರಾಮಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಹಾಗೂ ಜಿಲ್ಲಾ ಪಂಚಾಯಿತಿ ವಿಧೇಯಕ 1985ರ ಅನ್ವಯ ಅರ್ಥೈಸಿದ ಹಾಗೆ.

(ಉ) ‘ರಿಜಿಸ್ಟ್ರಾರ್’ ಎಂದರೆ ಹಿಂದೂ ವಿವಾಹಗಳ ಅಧಿನಿಯಮ 1955 ರಲ್ಲಿ ಅರ್ಥೈಸಿದ ಹಾಗೆ.

(ಊ) ಸರ್ಕಾರ ಎಂದರೆ ‘ಕರ್ನಾಟಕ ಸರ್ಕಾರ’

**3. ವಿವಾಹ ಸಭಾಂಗಣಗಳ ಕಡ್ಡಾಯ ನೋಂದಣಿ:–**

(1) ಸಂಬಂಧಿತ ಮಾಲೀಕರು ತಮ್ಮ ವಿವಾಹ ಸಭಾಂಗಣಗಳನ್ನು ಕಡ್ಡಾಯವಾಗಿ ಆಯಾ ಕ್ಷೇತ್ರಗಳಿಗೆ ಸಂಬಂಧಿತ ಸ್ಥಳೀಯ ಸಂಸ್ಥೆಗಳಲ್ಲಿ ನೋಂದಾಯಿಸಬೇಕು.

(2) ವಿವಾಹ ಸಭಾಂಗಣಗಳಲ್ಲಿ ಲಭ್ಯವಿರುವ ಎಲ್ಲಾ ಮೂಲಭೂತ ಸೌಕರ್ಯಗಳು ಎಂದರೆ ಕೂರುವ ವ್ಯವಸ್ಥೆ, ವಾಹನ ನಿಲ್ದಾಣ, ತ್ಯಾಜ್ಯ ವಿಲೇವಾರಿ ವ್ಯವಸ್ಥೆ ಇತ್ಯಾದಿಗಳನ್ನು ಸರ್ಕಾರದ ಆದೇಶದ ಅನ್ವಯ, ನೋಂದಣಿ ಅಧಿಕಾರಿಗಳಿಗೆ ಸಲ್ಲಿಸತಕ್ಕದ್ದು.

(3) ರಾಜ್ಯದಲ್ಲಿ ಯಾವುದೇ ಮದುವೆ ಮಂಟಪ ಒಂದು ದಿವಸದ ಬಾಡಿಗೆಯನ್ನು ಗರಿಷ್ಠ ರೂ. 50,000/–ಕ್ಕೆ ಮಿತಿಗೊಳಿಸಬೇಕು.

(4) ವಾಹನ ನಿಲ್ದಾಣ ಸೌಲಭ್ಯವಿಲ್ಲದೆ ಸಾರ್ವಜನಿಕ ಸಂಚಾರಕ್ಕೆ ಅಡ್ಡಿಗೊಳಿಸುತ್ತಿರುವ ಎಲ್ಲಾ ಮದುವೆ ಮಂಟಪಗಳ ಪರವಾನಿಗಿಯನ್ನು ಕೂಡಲೇ ರದ್ದುಗೊಳಿಸಬೇಕು.

(5) ಪ್ರತಿ ಸಭಾಂಗಣಕ್ಕೂ ಲಭ್ಯವಿರುವ ಸೌಲಭ್ಯಗಳನ್ನು ಆಧರಿಸಿ ಹಾಗೂ ಸರ್ಕಾರದ ನಿಯಮಾವಳಿಗೆ ಒಳಪಟ್ಟಂತೆ ಪರವಾನಿಗಿ(ಲೈಸನ್ಸ್) ಕೊಡಲು ಆಯಾ ಸ್ಥಳೀಯ ಸಂಸ್ಥೆ (Local Body)ಗೆ ಅಧಿಕಾರವಿರುತ್ತದೆ.

(6) ಸ್ಥಳೀಯ ಸಂಸ್ಥೆ (Local Body) ಕೊಡುವ ಲೈಸನ್ಸ್ ಮೊದಲು ಒಂದು ವರ್ಷದ ಅವಧಿಗೆ ಸೀಮಿತವಾಗಿದ್ದು, ಸೂಕ್ತ ಪರಿಶೀಲನೆ ನಂತರ ಮತ್ತೊಂದು ವರ್ಷ ಮುಂದುವರೆಸಲು ಅವಕಾಶವಿರುತ್ತದೆ.

(7) **ವಿವಾಹ ನೋಂದಣಿ ಅಧಿಕಾರಿಗೆ ಕೊಡಬೇಕಾದ ಮಾಹಿತಿ:–**
ವರ ಅಥವಾ ವಧುವಿನ ಮಾಹಿತಿಗಳನ್ನು ಅಂದರೆ ಹೆಸರು, ಹುಟ್ಟಿದ ದಿನಾಂಕ, ಪೋಷಕರ ವಿವರ, ವಿವಾಹದ ದಿನಾಂಕ, ಸಭಾಂಗಣ, ವಿವಾಹದಲ್ಲಿ ಪ್ರಸ್ತುತವಿರುವ ಅತಿಥಿ ಹಾಗೂ ಆಮಂತ್ರಿತರ ಸಂಖ್ಯೆ ಇವುಗಳನ್ನು ನೋಂದಣಿ ಅಧಿಕಾರಿಗೆ 15 ದಿನಗಳ ಪೂರ್ವಭಾವಿಯಾಗಿ ಸಲ್ಲಿಸತಕ್ಕದ್ದು.

(8) ವಿವಾಹದಲ್ಲಿ ಪಾಲ್ಗೊಳ್ಳುವ ಅತಿಥಿ ಆಮಂತ್ರಿಕರ ಸಂಖ್ಯೆ ಗರಿಷ್ಠ 300 ಆಗಿರತಕ್ಕದ್ದು.

**4. ವಿವಾಹಗಳ ಕಡ್ಡಾಯ ನೋಂದಣಿ:–**

(1) ಕರ್ನಾಟಕ ರಾಜ್ಯದಲ್ಲಿ ನಡೆಯುವ ಎಲ್ಲಾ ವಿವಾಹಗಳೂ ಕಡ್ಡಾಯವಾಗಿ ನೋಂದಣಿಯಾಗತಕ್ಕದ್ದು.

(2) ವಿವಾಹದ ನೋಂದಣಿ ಜವಾಬ್ದಾರಿಯು ವರ ಮತ್ತು ವಧುವಿನ ಸಹ ಜವಾಬ್ದಾರಿಯಾಗಿರುತ್ತದೆ.

**5. ವಿವಾಹ ನೋಂದಣಿ ಅಧಿಕಾರಿಯ ವರದಿ:–**

(1) ವಿವಾಹ ನೋಂದಣಿ ಅಧಿಕಾರಿಯು ಪ್ರತಿಯೊಂದು ವಿವಾಹ ಸಮಾರಂಭವನ್ನು ಖುದ್ದಾಗಿ ಪರೀಕ್ಷಿಸಿ ವಿವರವಾದ ವರದಿಯನ್ನು ಸಕ್ಷಮ ಪ್ರಾಧಿಕಾರಿಗೆ ಕಡ್ಡಾಯವಾಗಿ ಸಲ್ಲಿಸಬೇಕು.

(2) ವಿವಾಹ ಸಂಬಂಧಿತ ವೆಚ್ಚಗಳ ಮಾಹಿತಿಯನ್ನು ವಿವಾಹ ನೋಂದಣಿ ಅಧಿಕಾರಿಯು ಎಲ್ಲಾ ಸಂಬಂಧಿತ ವಿವರಗಳೊಂದಿಗೆ ಆದಾಯ ತೆರಿಗೆ ವಿಧೇಯಕ 1964ರ ಅನ್ವಯ ಒಳಪಟ್ಟು ಸಲ್ಲಿಸಬೇಕು.

**6. ನಿರ್ದೇಶನಗಳನ್ನು ಪಾಲಿಸದಿದ್ದಲ್ಲಿ ಪಾವತಿಸಬೇಕಾದ ದಂಡ:–**

(1) ವರ ಮತ್ತು ವಧುವಿನ ಪೋಷಕರು ಈ ಉಪಬಂಧಗಳನ್ನು ಪಾಲಿಸದಿದ್ದಲ್ಲಿ ಮತ್ತು ವಿವಾಹ ನೋಂದಣಿ ಅಧಿಕಾರಿಯು ವರದಿಯನ್ನಾಧರಿಸಿ ಸರ್ಕಾರ ನಿಗದಿಪಡಿಸಿದ ದಂಡ ತೆರಬೇಕಾಗುತ್ತದೆ.

(2) ಈ ದಂಡಕ್ಕೆ ವಧು–ವರರಿಬ್ಬರ ಪೋಷಕರಿಬ್ಬರೂ ಸಮಾನ ಹೊಣೆಗಾರರಾಗಿರುತ್ತಾರೆ.

**7. ನಿಯಮಗಳನ್ನು ರೂಪಿಸುವ ಅಧಿಕಾರ:–**

(1) ಸೂಕ್ತ ನಿಯಮಗಳನ್ನು ರೂಪಿಸಲು ಹಾಗೂ ಅವುಗಳನ್ನು ಅನುಷ್ಠಾನಗೊಳಿಸಲು ಸರ್ಕಾರಕ್ಕೆ ಅಧಿಕಾರವಿರುತ್ತದೆ.

(2) ಈ ನಿಯಮಗಳನ್ನು ಹಾಗೂ ಅವುಗಳ ಮಾರ್ಪಾಡುಗಳನ್ನು ಸರ್ಕಾರ ವಿಧಾನಸಭೆ ಮುಂದೆ ಪ್ರಕಟಣೆಗೆ 6 ತಿಂಗಳ ಮುಂಚೆಯೇ ಮಂಡಿಸಬೇಕಾಗಿರುತ್ತದೆ.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ರಾಜ್ಯದಲ್ಲಿ ನಡೆಯುತ್ತಿರುವ ವಿವಾಹಗಳು ತನ್ನ ಮೂಲ ಉದ್ದೇಶವನ್ನು ಬದಿಗಿಟ್ಟು ಆಡಂಬರದ, ಅಸಹ್ಯಕರ, ಐಶ್ವರ್ಯ ಪ್ರದರ್ಶನದ ಹಾಗೂ ಡಂಭಾಚಾರದ ಕಾರ್ಯಕ್ರಮಗಳಾಗಿ ಪರಿಣಮಿಸುತ್ತಿರುವುದರಿಂದ ನಾಗರಿಕ ಸಮಾಜವು ತಲೆತಗ್ಗಿಸಬೇಕಾದ ಪರಿಸ್ಥಿತಿ ಬಂದಿದೆ. ಇಂತಹ ಅದ್ದೂರಿ ಹಾಗೂ ಅಸಹ್ಯಕರ ಪ್ರದರ್ಶನಗಳನ್ನು ಒಳಗೊಂಡಂತಹ ವಿವಾಹಗಳನ್ನು ನಿರ್ಬಂಧಿಸಲು ಮತ್ತು ಅದಕ್ಕೆ ಸಂಬಂಧಿಸಿದ ವಿಧಿವಿಧಾನಗಳನ್ನು ರೂಪಿಸಲು ಪ್ರಸ್ತುತ ಯಾವುದೇ ಶಾಸನ ಲಭ್ಯವಿರುವುದಿಲ್ಲ.

ಆದ್ದರಿಂದ ಈ ವಿಧೇಯಕ,

**ಅಧಿಕೃತ ಜ್ಞಾಪನ ಪತ್ರ**

ಪ್ರಸ್ತಾವಿತ ವಿಧೇಯಕವು ಯಾವುದೇ ಆರ್ಥಿಕ ವೆಚ್ಚವನ್ನು ಒಳಗೊಂಡಿರುವುದಿಲ್ಲ ಮತ್ತು ಸರ್ಕಾರದ ಬೊಕ್ಕಸಕ್ಕೆ ಹೊರೆಯಾಗುವುದಿಲ್ಲ.

**ಕೆ.ಆರ್. ರಮೇಶ್ ಕುಮಾರ್**
ವಿಧಾನಸಭಾ ಸದಸ್ಯರು

**ಎಸ್.ವೈ. ಕುಳಗೇರಿ**
ಕಾರ್ಯದರ್ಶಿ(ಪ್ರ)
ಕರ್ನಾಟಕ ವಿಧಾನಸಭೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (125 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ– *IV-A* | ಬೆಂಗಳೂರು, ಸೋಮವಾರ, ನವೆಂಬರ್ ೨೩, ೨೦೧೫ (ಮಾರ್ಗಶಿರ ೦೨, ಶಕ ವರ್ಷ ೧೯೩೭) | ನಂ. ೧೪೦೩ |
|---|---|---|
| ***Part– IV-A*** | ***Bengaluru, Monday, November 23, 2015 (Margashira 02, Shaka Varsha 1937)*** | ***No. 1403*** |


**ಶಿಕ್ಷಣ ಸಚಿವಾಲಯ**

**ಅಧಿಸೂಚನೆ**

**ನಂ. ಇಡಿ 11 ಡಿಜಿಎಂ 2014, ಬೆಂಗಳೂರು, ದಿನಾಂಕ 16–10–2015**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ 1978ರ (1990ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ (2)ನೇ ಉಪ ಪ್ರಕರಣ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 11 ಡಿಜಿಎಂ 2014 ದಿನಾಂಕ: 21ನೇ ಸೆಪ್ಟೆಂಬರ್ 2015 ಭಾಗ IV ಎ ಸಂಖ್ಯೆ:1064 ನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಕರಡು ನಿಯಮಗಳನ್ನು ದಿನಾಂಕ 21ನೇ ಸೆಪ್ಟೆಂಬರ್ 2015 ರಂದು ಪ್ರಕಟಿಸಿ ಭಾದಿತರಾಗುವಂತಹ ಎಲ್ಲಾ ವ್ಯಕ್ತಿಗಳಿಂದ, 15 ದಿವಸಗಳೊಳಗಾಗಿ ಆಕ್ಷೇಪಣೆ ಮತ್ತು ಸಲಹೆಗಳನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು.

ಮತ್ತು ಸದರಿ ರಾಜ್ಯಪತ್ರವನ್ನು 2015ರ ಸೆಪ್ಟೆಂಬರ್ 21ರಂದು ಸಾರ್ವಜನಿಕರಿಗೆ ಲಭ್ಯಪಡಿಸಲಾಗಿದೆ.

ಅದರಂತೆ ಮೇಲೆ ನಿಗದಿಪಡಿಸಿದ ಅವಧಿಯೊಳಗೆ ಸ್ವೀಕೃತಗೊಂಡ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿದೆ.

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ 1978ರ (1990ರ ಕರ್ನಾಟಕ ಅಧಿನಿಯಮ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1) ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಗಿನಂತೆ ನಿಯಮಗಳನ್ನು ರಚಿಸಿರುತ್ತದೆ, ಎಂದರೆ :–

**ನಿಯಮಗಳು**

**1. ಶೀರ್ಷಿಕೆ ಮತ್ತು ಪ್ರಾರಂಭ:** ಈ ನಿಯಮಗಳನ್ನು ಕರ್ನಾಟಕ ರಾಜ್ಯ ನಾಗರಿಕ ಸೇವಾ (ಸಾರ್ವಜನಿಕ ಶಿಕ್ಷಣ ಇಲಾಖೆಯ ಕ್ಷೇತ್ರ ಶಿಕ್ಷಣಾಧಿಕಾರಿಗಳು/ಉಪನಿರ್ದೇಶಕರು ಮತ್ತು ತತ್ಸಮಾನ ವೃಂದದ ಅಧಿಕಾರಿಗಳ ವರ್ಗಾವಣೆ ನಿಯಂತ್ರಣ) ನಿಯಮಗಳು, 2015 ಎಂದು ಕರೆಯತಕ್ಕದ್ದು.

ಇದು, ಕರ್ನಾಟಕ ರಾಜ್ಯ ಪತ್ರದಲ್ಲಿ ಅಂತಿಮವಾಗಿ ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು:** (1) ಈ ನಿಯಮಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು–

(ಅ) "ನಿಯಮ" ಎಂದರೆ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ 1978 (1990ರ ಕರ್ನಾಟಕ ಅಧಿನಿಯಮ 14);

(ಆ) "ಕಾರ್ಯಕಾರಿ" ಹುದ್ದೆ ಎಂದರೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಕ್ಷೇತ್ರ ಶಿಕ್ಷಣಾಧಿಕಾರಿಗಳು ಅಥವಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು(ಆಡಳಿತ) ಹುದ್ದೆಗಳು;

(ಇ) "ಗರಿಷ್ಠ ಅವಧಿ" ಎಂದರೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಹುದ್ದೆ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಹುದ್ದೆ ಅಥವಾ ತತ್ಸಮಾನ ಹುದ್ದೆಯಲ್ಲಿ ನಿರಂತರವಾಗಿ ಮೂರು ವರ್ಷಗಳ ಸೇವೆಯನ್ನು ಪೂರೈಸಿರುವುದು;

(ಈ) "ಕನಿಷ್ಠ ಅವಧಿ" ಎಂದರೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಹುದ್ದೆ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಹುದ್ದೆ ಅಥವಾ ತತ್ಸಮಾನ ಹುದ್ದೆಯಲ್ಲಿ ನಿರಂತರವಾಗಿ ಎರಡು ವರ್ಷಗಳ ಸೇವೆಯನ್ನು ಪೂರೈಸಿರುವುದು;

(ಉ) "ಕಾರ್ಯಕಾರಿ ಅಲ್ಲದ ಹುದ್ದೆ " ಎಂದರೆ ಕ್ಷೇತ್ರ ಶಿಕ್ಷಣಾಧಿಕಾರಿ ಅಥವಾ ಉಪ ನಿರ್ದೇಶಕರು(ಆಡಳಿತ) ಹುದ್ದೆಯನ್ನು ಹೊರತುಪಡಿಸಿ, ಸಾಂದರ್ಭಿಕವಾಗಿ, ಹಿರಿಯ ಉಪನ್ಯಾಸಕರು(ಡಯಟ್), ಉಪನ್ಯಾಸಕರು(ಸಿ.ಟಿ.ಇ), ಪ್ರಾಂಶುಪಾಲರು(ಡಯಟ್) ಅಥವಾ ಉಪನಿರ್ದೇಶಕರು(ಅಭಿವೃದ್ಧಿ), ಪ್ರವಾಚಕರು(ಸಿ.ಟಿ.ಇ) ಹುದ್ದೆಗಳನ್ನು ಒಳಗೊಂಡಂತೆ ಸದರಿ ಹುದ್ದೆಗಳಿಗೆ ತತ್ಸಮಾನ ಹುದ್ದೆಗಳು;

(ಊ) **"ಅಧಿಕಾರಿಗಳು"** ಎಂದರೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು ಹಾಗೂ ತತ್ಸಮಾನ ವೃಂದ ಮತ್ತು ಶಿಕ್ಷಣಾಧಿಕಾರಿ ಹಾಗೂ ತತ್ಸಮಾನ ವೃಂದದ ಹುದ್ದೆಗೆ ಕರ್ನಾಟಕ ಶಿಕ್ಷಣ ಇಲಾಖಾ ಸೇವೆಗಳು(ಸಾರ್ವಜನಿಕ ಶಿಕ್ಷಣ ಇಲಾಖೆ) ರನ್ವಯ ನೇಮಕಗೊಂಡಿರುವ ಅಥವಾ ಸೇವೆ ಸಲ್ಲಿಸುತ್ತಿರುವವರು

(ಎ) ' ಸೆಕ್ಷನ್' ಎಂದರೆ ಅಧಿನಿಯಮದ ಸೆಕ್ಷನ್;

(ಏ) 'ವರ್ಗಾವಣೆ' ಎಂದರೆ ಒಂದು ಸ್ಥಳದಲ್ಲಿ ಅಥವಾ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಧಿಕಾರಿಯನ್ನು ಮತ್ತೊಂದು ಸ್ಥಳಕ್ಕೆ ಅಥವಾ ತತ್ಸಮಾನವಾದ ಮತ್ತೊಂದು ಹುದ್ದೆಗೆ ಸ್ಥಳನಿಯುಕ್ತಿಗೊಳಿಸುವುದು;

**3. ಸಕ್ಷಮ ಪ್ರಾಧಿಕಾರ:** ಈ ಕೆಳಕಂಡ ಕೋಷ್ಟಕದ (2)ನೇ ಅಂಕಣದಲ್ಲಿ ನಮೂದಿಸಿದ ಅಧಿಕಾರಿಗಳ ವರ್ಗಾವಣೆಗೆ ಅದೇ ಕೋಷ್ಟಕದ (3)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿರುವ ಪ್ರಾಧಿಕಾರವು ಸಕ್ಷಮ ಪ್ರಾಧಿಕಾರವಾಗಿರುತ್ತದೆ.

**ಕೋಷ್ಟಕ**

| ಕ್ರ.ಸಂ | ವೃಂದ | ಸಕ್ಷಮ ಪ್ರಾಧಿಕಾರ |
|---|---|---|
| (1) | (2) | (3) |
| 1 | ಕ್ಷೇತ್ರ ಶಿಕ್ಷಣಾಧಿಕಾರಿ ಹಾಗು ತತ್ಸಮಾನ ವೃಂದ/ಹುದ್ದೆಗಳು | ಸರ್ಕಾರ |
| 2 | ಉಪನಿರ್ದೇಶಕರು ಹಾಗು ತತ್ಸಮಾನ ವೃಂದ/ಹುದ್ದೆಗಳು | ಸರ್ಕಾರ |

**4. 'ವರ್ಗಾವಣೆಗೆ ಆದ್ಯತೆಗಳು'**

(1) ವರ್ಗಾವಣೆಯನ್ನು ತಮ್ಮ ಹಕ್ಕೆಂದು ಪ್ರತಿಪಾದಿಸುವಂತಿಲ್ಲ. ಅಧಿಕಾರಿಗಳ ವರ್ಗಾವಣೆಯನ್ನು ಈ ಕೆಳಗಿನ ಆದ್ಯತೆಗಳನುಸಾರ ಮಾಡತಕ್ಕದ್ದು, ಅವುಗಳೆಂದರೆ:–

(i) ಗರಿಷ್ಟ ಅವಧಿಯವರೆಗೆ ಕಾರ್ಯಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸಿರುವ ಅಧಿಕಾರಿಗಳ ವರ್ಗಾವಣೆ.

(ii) ಗರಿಷ್ಟ ಅವಧಿಯವರೆಗೆ ಕಾರ್ಯಕಾರಿ ಅಲ್ಲದ ಹುದ್ದೆಯಲ್ಲಿ ಕಾರ್ಯನಿರ್ವಹಿಸಿರುವ ಅಧಿಕಾರಿಗಳ ವರ್ಗಾವಣೆ.

(iii) ಗಂಭೀರ ಸ್ವರೂಪದ ಖಾಯಿಲೆಯ ಆಧಾರದಡಿ ಅಧಿಕಾರಿಗಳ ವರ್ಗಾವಣೆ.

(iv) ಪತಿ – ಪತ್ನಿ ಪ್ರಕರಣದಡಿ ಅಧಿಕಾರಿಗಳ ವರ್ಗಾವಣೆ.

(2) ಒಬ್ಬ ಅಧಿಕಾರಿಯು ಆ ಹುದ್ದೆಯಲ್ಲಿ ಕನಿಷ್ಠ ಅವಧಿಯನ್ನು ಪೂರ್ಣಗೊಳಿಸದ ಹೊರತು ಆ ಹುದ್ದೆಯಿಂದ ಆತನನ್ನು ವರ್ಗಾಯಿಸತಕ್ಕದ್ದಲ್ಲ. ಆದಾಗ್ಯೂ, ಸಾರ್ವಜನಿಕ ಹಿತದೃಷ್ಠಿಯಿಂದ ಸಕ್ಷಮ ಪ್ರಾಧಿಕಾರವು ವರ್ಗಾವಣೆಗೆ ಕಾರಣವನ್ನು ನಮೂದಿಸಿ, ಅವಧಿ ಪೂರ್ವ ವರ್ಗಾವಣೆ ಆದೇಶವನ್ನು ಮಾಡಬಹುದು.

**5. ವರ್ಗಾವಣೆಗೆ ನಿರ್ಬಂಧಗಳು/ವರ್ಗಾವಣೆ ಮಾಡುವಾಗ ಅನುಸರಿಸಬೇಕಾದ ಮಾನದಂಡ:–**

(1) ಕಾರ್ಯಕಾರಿ ಹುದ್ದೆಯಲ್ಲಿ ಗರಿಷ್ಟ ಅವಧಿಯನ್ನು ಪೂರೈಸಿರುವ ಅಧಿಕಾರಿಯನ್ನು ಕಾರ್ಯಕಾರಿ ಅಲ್ಲದ ಹುದ್ದೆಗೆ ವರ್ಗಾಯಿಸತಕ್ಕದ್ದು.

(2) ಯಾವುದೇ ಒಬ್ಬ ಅಧಿಕಾರಿಯನ್ನು, ಬಿ.ಬಿ.ಎಂ.ಪಿ ಮತ್ತು ಇತರ ನಗರ ಸಭೆಯ ವ್ಯಾಪ್ತಿಯು ಸೇರಿದಂತೆ ಆ ಅಧಿಕಾರಿಯ ಸೇವಾ ಪುಸ್ತಕದಲ್ಲಿ ನಮೂದಿಸಿರುವ ಅವರ ಸ್ವಂತ ಜಿಲ್ಲೆಯಲ್ಲಿನ ಕಾರ್ಯಕಾರಿ ಹುದ್ದೆಗೆ ನಿಯುಕ್ತಿಗೊಳಿಸತಕ್ಕದ್ದಲ್ಲ.

(3) ಬಿಬಿಎಂಪಿ ವ್ಯಾಪ್ತಿಯಲ್ಲಿ ಕಾರ್ಯಕಾರಿ ಹುದ್ದೆಯಲ್ಲಿ ಒಂದು ಅವಧಿಯನ್ನು ಪೂರ್ಣಗೊಳಿಸಿರುವ ಅಧಿಕಾರಿಯನ್ನು ಪುನಃ ಬಿ.ಬಿ.ಎಂ.ಪಿ ವ್ಯಾಪ್ತಿಯ ಕಾರ್ಯಕಾರಿ ಹುದ್ದೆಗೆ ಸ್ಥಳನಿಯುಕ್ತಿಗೊಳಿಸತಕ್ಕದ್ದಲ್ಲ. ಆದರೆ, ಬಿ.ಬಿ.ಎಂ.ಪಿ ವ್ಯಾಪ್ತಿಯನ್ನು ಹೊರತು ಪಡಿಸಿ ನಿಯುಕ್ತಿಗೊಳಿಸತಕ್ಕದ್ದು.

(4) ಗಂಭೀರ ಸ್ವರೂಪದ ಖಾಯಿಲೆಯ ಆಧಾರದ ಮೇಲೆ ವರ್ಗಾವಣೆ ಕೋರಿಕೆಯನ್ನು, ಜಿಲ್ಲಾ ಆರೋಗ್ಯಾಧಿಕಾರಿಯ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇರೆಗೆ ಕಾರ್ಯಕಾರಿ ಅಲ್ಲದ ಹುದ್ದೆಗೆ ಮಾತ್ರ ಸ್ಥಳನಿಯುಕ್ತಿಗೊಳಿಸಲು ಪರಿಗಣಿಸತಕ್ಕದ್ದು.

(5) ಸರ್ಕಾರಿ ಸೇವೆಯಲ್ಲಿರುವ ಅಥವಾ ಮೂಲತಃ ಕರ್ನಾಟಕ ಸರ್ಕಾರದಿಂದ ಅನುದಾನ ಪಡೆಯುತ್ತಿರುವ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ದಂಪತಿಗಳ ವರ್ಗಾವಣೆ ಕೋರಿಕೆಗಳನ್ನು ಕಾರ್ಯಕಾರಿ ಅಲ್ಲದ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಲು ಮಾತ್ರ ಪರಿಗಣಿಸತಕ್ಕದ್ದು.

(6) ಕಾರ್ಯಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಯಾವುದೇ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ಅಥವಾ ಕ್ರಿಮಿನಲ್ ಪ್ರಕರಣದಲ್ಲಿ ವಿಚಾರಣೆಯನ್ನು ಪಾರಂಭಿಸಿದ್ದರೆ ಅಥವಾ ದಂಡನೆಯನ್ನು ವಿಧಿಸಿದ್ದರೆ ಅಂತಹವರನ್ನು ಕಾರ್ಯಕಾರಿ ಅಲ್ಲದ ಹುದ್ದೆಗೆ ವರ್ಗಾಯಿಸತಕ್ಕದ್ದು.

(7) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಗಳು, 1957ರನ್ವಯ ದಂಡನೆಗೆ ಒಳಗಾಗಿದ್ದಲ್ಲಿ ಅಂತಹ ಅಧಿಕಾರಿಗಳನ್ನು ಕಾರ್ಯಕಾರಿ ಅಲ್ಲದ ಹುದ್ದೆಗೆ ಮಾತ್ರ ಸ್ಥಳನಿಯುಕ್ತಿಗೊಳಿಸತಕ್ಕದ್ದು.

**6. ಸಕ್ಷಮ ಪ್ರಾಧಿಕಾರದ ವಿವೇಚನಾಧಿಕಾರ:–** ನಿಯಮ 5 ರಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಸಕ್ಷಮ ಪ್ರಾಧಿಕಾರವು ಸಕಾರಣಗಳನ್ನು ದಾಖಲಿಸಿ ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾವಣೆ ಮಾಡಬಹುದಾಗಿರುತ್ತದೆ. ಈ ನಿಯಮದಡಿಯ ವರ್ಗಾವಣೆಗಳು ಒಂದು ಕ್ಯಾಲೆಂಡರ್ ವರ್ಷದ ಅವಧಿಯಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿ ಹಾಗೂ ಉಪ ನಿರ್ದೇಶಕರ ವೃಂದ ಬಲದ ಶೇಕಡ 2 ರಷ್ಟನ್ನು ಮೀರತಕ್ಕದ್ದಲ್ಲ.

**7. ದುರ್ನಡತೆ:–** ಯಾವುದೇ ಅಧಿಕಾರಿಯು ನಿರ್ದಿಷ್ಟ ಸ್ಥಳಕ್ಕೆ ವರ್ಗಾವಣೆ ಕೋರಿ ರಾಜಕೀಯ ಒತ್ತಡ ತರತಕ್ಕದ್ದಲ್ಲ. ಅಂತಹ ಪ್ರತ್ಯಕ್ಷ ಅಥವಾ ಪರೋಕ್ಷ ಪ್ರಯತ್ನಗಳು, ಸದರಿ ಅಧಿಕಾರಿಯ ದುರ್ನಡತೆ ಎಂದು ಪರಿಗಣಿಸತಕ್ಕದ್ದು ಹಾಗೂ ಅಂತಹ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ, 1957ರನ್ವಯ ಶಿಸ್ತು ಕ್ರಮಕ್ಕೆ ಒಳಪಡತಕ್ಕವನಾಗಿರತ್ತಾನೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಆರ್. ಅನ್ನಪೂರ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಸಮಿತಿಗಳು)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೩) (೫೦೦ ಪ್ರತಿಗಳು)

***RNI No. KARBIL/2001/47147***

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– ***IV-A*** | ಬೆಂಗಳೂರು, ಸೋಮವಾರ, ನವೆಂಬರ್ ೨೩, ೨೦೧೫ (ಮಾರ್ಗಶಿರ ೦೨, ಶಕ ವರ್ಷ ೧೯೩೭) | ನಂ. ೧೪೦೪ |
| ***Part– IV-A*** | ***Bengaluru, Monday, November 23, 2015 (Margashira 02, Shaka Varsha 1937)*** | ***No. 1404*** |


**PARLIAMENTARY AFFAIRS SECRETARIAT**

**NOTIFICATION**

**No: DPAL 17 SAMVYAVI 2015, Bengaluru, dated: 23.11.2015**

In exercise of the powers conferred by clause (a) of section 2 of the Karnataka Parliamentary Secretaries Salary, Allowances and Miscellaneous Provisions Act, 1963 (Karnataka Act 15 of 1963), the Chief Minister of Karnataka has hereby appoints Sri.Pramod Madhwaraj, the Member of the Karnataka Legislative Assembly, Udupi as Parliamentary Secretary with immediate effect.

Whereas, section 3 of the said Act empowers the State Government to specify the salary and allowances that are admissible to such Parliamentary Secretary.

Whereas Section 5 of the said Act empowers the Chief Minister or the concerned Minister to specify the functions of the Parliamentary Secretary to whom he is Parliamentary Secretary.

Now therefore, in exercise of the powers conferred by section 3 and section 5 of the Karnataka Parliamentary Secretaries Salary, Allowances and Miscellaneous Provisions Act, 1963, the Government of Karnataka hereby specify that Sri. Pramod Madhwaraj, the Member of the Karnataka Legislative Assembly, Udupi has been appointed, as Parliamentary Secretary to the Minister for Revenue.

He shall be entitled to such salary and allowances as admissible to the Minister of State under the Karnataka Ministers Salaries and Allowances Act, 1956.

By Order and in the name of the Governor of Karnataka,

**S.B. GUNJIGAVI**
Secretary to Government,
Department of Parliamentary Affairs

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (100 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ- III | ಬೆಂಗಳೂರು, ಮಂಗಳವಾರ, ನವೆಂಬರ್ ೨೪, ೨೦೧೫ (ಮಾರ್ಗಶಿರ ೦೩, ಶಕ ವರ್ಷ ೧೯೩೭) | ನಂ. ೧೪೦೭ |
|---|---|---|
| Part–III | Bengaluru, Tuesday, November 24, 2015 (Margashira 03, Shaka Varsha 1937) | No. 1407 |


**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

**ಕೆ.ಎಸ್.ಸಿ.ಎಂ.ಎಫ್. ಕಟ್ಟಡ (ಹಿಂಭಾಗ), ನಂ.8, 1ನೇ ಮಹಡಿ, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು–560052.**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ರಾಚುಆ/53/ಟಿಜೆಡ್‌ಪಿ/2015, ದಿನಾಂಕ: 23–11–2015**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 (1993 ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ರ 163 ನೇ ಪ್ರಕರಣ ಮತ್ತು ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1899 (1899 ರ ಕರ್ನಾಟಕ ಅಧಿನಿಯಮ ಸಂಖ್ಯೆ 3) ರ ಪ್ರಕರಣ 21 ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಜ್ಯ ಚುನಾವಣಾ ಆಯೋಗವು **ಬೆಂಗಳೂರು ನಗರ ಜಿಲ್ಲಾ ಪಂಚಾಯತಿಗೆ** ಸಂಬಂಧಿಸಿದಂತೆ ದಿನಾಂಕ: 31–10–2015 ರಂದು ಹೊರಡಿಸಿರುವ ಅಧಿಸೂಚನೆ ಸಂಖ್ಯೆ ರಾಚುಆ/53/ಟಿಜೆಡ್‌ಪಿ/2015 ರಲ್ಲಿನ ಕೋಷ್ಟಕದ (2) ನೇ ಅಂಕಣದಲ್ಲಿ ನಮೂದಿಸಿರುವ 40–ಮರಸೂರು ಜಿಲ್ಲಾ ಪಂಚಾಯತಿ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಕೋಷ್ಟಕದ ಅಂಕಣ (3) ರಲ್ಲಿ ಕೆಲವು ಗ್ರಾಮಗಳು ಕಣ್ತಪ್ಪಿನಿಂದ ಕೈಬಿಟ್ಟು ಹೋಗಿದ್ದರಿಂದ ಅವುಗಳನ್ನು ಸೇರ್ಪಡೆ ಮಾಡಲು ಈ ಕೆಳಕಂಡಂತೆ ತಿದ್ದುಪಡಿ ಮಾಡಿದೆ.

**ಕೋಷ್ಟಕ**

| ತಾಲ್ಲೂಕಿನ ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿ | |
|---|---|---|---|
| | | ದಿನಾಂಕ: 31–10–2015 ರ ಅಧಿಸೂಚನೆಯಲ್ಲಿ ಮುದ್ರಿತವಾಗಿರುವ ಗ್ರಾಮಗಳು | ಸೇರ್ಪಡೆ |
| (1) | (2) | (3) | (4) |
| ಆನೇಕಲ್ | 40–ಮರಸೂರು | ಮರಸೂರು, ಮರಸೂರು ಅಗ್ರಹಾರ, ನಾಗನಾಯಕನಹಳ್ಳಿ, ಬಂಡಾಪುರ, ಆಡೆಸೊನ್ನಹಟ್ಟಿ, ಮಡಿವಾಳ–2, ಶೆಟ್ಟಹಳ್ಳಿ(ದಾ), ಪಾತೂರು, ಬ್ಯಾಗಡದೇನಹಳ್ಳಿ, ಆವಡದೇನಹಳ್ಳಿ, ಕೂನಮಡಿವಾಳ, ಸೊಪ್ಪಹಳ್ಳಿ, ದೊಡ್ಡಹಾಗಡೆ, ಕೆಂಪವಡೇರಹಳ್ಳಿ, ಯಲ್ಲಮ್ಮನ ಪಾಳ್ಯ, ಚಿಕ್ಕ ಹಾಗಡೆ, ಕಮ್ಮಸಂದ್ರ ಅಗ್ರಹಾರ, ವಡೇರಹಳ್ಳಿ, ತಟ್ಟನಹಳ್ಳಿ, ಕಾವಲಹೊಸಹಳ್ಳಿ. | ಕರ್ಪೂರು, ಅರವೆಂಟಿಗೆಪುರ, ಹಾಲ್ದೆನಹಳ್ಳಿ, ದಿನ್ನೂರು, ಬೆಸ್ತಮಾನಹಳ್ಳಿ, ರಾಚಮಾನಹಳ್ಳಿ, ಬಿದರಗೆರೆ. |

ಆದೇಶಾನುಸಾರ

**ಆರ್. ಚಂದ್ರಶೇಖರ್**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (25 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ- *III* | ಬೆಂಗಳೂರು, ಮಂಗಳವಾರ, ನವೆಂಬರ್ ೨೪, ೨೦೧೫ (ಮಾರ್ಗಶಿರ ೦೩, ಶಕ ವರ್ಷ ೧೯೩೭) | ನಂ. ೧೪೦೮ |
|---|---|---|
| ***Part–III*** | ***Bengaluru, Tuesday, November 24, 2015 (Margashira 03, Shaka Varsha 1937)*** | ***No. 1408*** |



**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

**ಕೆ.ಎಸ್.ಸಿ.ಎಂ.ಎಫ್. ಕಟ್ಟಡ (ಹಿಂಭಾಗ), ನಂ.8, 1ನೇ ಮಹಡಿ, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು–560052.**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ರಾಚುಆ/60/ಟಿಜೆಡ್‌ಪಿ/2015, ದಿನಾಂಕ: 23–11–2015**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 (1993 ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ರ 163 ನೇ ಪ್ರಕರಣ ಮತ್ತು ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1899 (1899 ರ ಕರ್ನಾಟಕ ಅಧಿನಿಯಮ ಸಂಖ್ಯೆ 3) ರ ಪ್ರಕರಣ 21 ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಜ್ಯ ಚುನಾವಣಾ ಆಯೋಗವು **ಶಿವಮೊಗ್ಗ ಜಿಲ್ಲಾ ಪಂಚಾಯತಿಗೆ** ಸಂಬಂಧಿಸಿದಂತೆ ದಿನಾಂಕ: 31–10–2015 ರಂದು ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ರಾಚುಆ/60/ಟಿಜೆಡ್‌ಪಿ/2015 ರಲ್ಲಿನ ಕೋಷ್ಟಕದ (2)ನೇ ಅಂಕಣದಲ್ಲಿ ನಮೂದಿಸಿರುವ ಜಿಲ್ಲಾ ಪಂಚಾಯತಿ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಕೋಷ್ಟಕದ (3) ನೇ ಅಂಕಣದಲ್ಲಿ ನಿಗದಿಪಡಿಸಲಾಗಿರುವ ಗ್ರಾಮಗಳನ್ನೊಳಗೊಂಡ ಪ್ರದೇಶದ ವಿವರಗಳಲ್ಲಿ ಈ ಕೆಳಕಂಡಂತೆ ತಿದ್ದುಪಡಿಗಳನ್ನು ಮಾಡಿದೆ.

**ಕೋಷ್ಟಕ**

| **ತಾಲ್ಲೂಕು** | **ಜಿಲ್ಲಾ ಪಂಚಾಯತಿ ಕ್ಷೇತ್ರದ ಸಂಖ್ಯೆ ಮತ್ತು ಹೆಸರು** | **ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿಯಲ್ಲಿನ ನಮೂದುಗಳಿಗೆ ಮಾಡಿರುವ ತಿದ್ದುಪಡಿ** | |
|---|---|---|---|
| | | **ದಿನಾಂಕ: 31–10–2015 ರ ಅಧಿಸೂಚನೆಯಲ್ಲಿ ಮುದ್ರಿತವಾಗಿರುವ ಗ್ರಾಮಗಳ ಹೆಸರು** | **ಸೇರ್ಪಡೆ/ಕೈಬಿಟ್ಟಿರುವುದು/ಮಾರ್ಪಾಡು** |
| **(1)** | **(2)** | **(3)** | **(4)** |
| ಸೊರಬ | 1–ಆನವಟ್ಟಿ | ವಡ್ಡಿಗೆರೆ(ಬೇ) | ಈ ಗ್ರಾಮವನ್ನು ಕೈಬಿಡಲಾಗಿದೆ. |
| ಶಿಕಾರಿಪುರ | 6–ಈಸೂರು | ತಟ್ಟಿಹಳ್ಳಿ | ತಟ್ಟಿಹಳ್ಳಿ ಗ್ರಾಮವು ಎರಡು ಬಾರಿ ಮುದ್ರಿತವಾಗಿದ್ದು ಒಂದು ಗ್ರಾಮವನ್ನು ಕೈಬಿಡಲಾಗಿದೆ. |
| ಶಿಕಾರಿಪುರ | 7–ಹೊಸೂರು | ಇಟ್ಟಿಗೆಹಳ್ಳಿ ತಾಂಡಾ | (ಇಟ್ಟಿಗೆಹಳ್ಳಿ ತಾಂಡಾ) ಎಂದು ಓದಿಕೊಳ್ಳುವುದು. |
| ಶಿವಮೊಗ್ಗ | 14–ಗಾಜನೂರು | ಗೋವಿಂದಾಪುರ, ಕಲ್ಲೂರು, ಅಗಸವಳ್ಳಿ, ರಾಮೇನಕೊಪ್ಪ, ಈಚವಾಡಿ, ಬಸವಾಪುರ, ಸಕ್ರೇಬೈಲು, ಹೊನ್ನಾಪುರ, ಗಾಜನೂರು, ಕುಡುಗಲಮನೆ, ಗಾಜನೂರುಅಗ್ರಹಾರ, ಗಾಜನೂರು.ಎಸ್.ಎಫ್, ತಿಮ್ಮಾಪುರ, ಹೊಸಹಳ್ಳಿ, ತಟ್ಟಿಕೆರೆ, ಹೊಸಕೊಪ್ಪ, ಗಾಜನೂರು ಮುಳ್ಳಕೆರೆ, ಇಂದಿರಾನಗರ ವೀರಾಪುರ, ಹೊಸಹಳ್ಳಿ, ಲಕ್ಷ್ಮೀಪುರ, ಕುಸ್ಕೂರು, ಯರಗನಾಳು, ಕಡೇಕಲ್, ಹಾಲಲಕ್ಕವಳ್ಳಿ, ಕೊರಲಹಳ್ಳಿ, ಕಾಚಿನಕಟ್ಟೆ, ಲಕ್ಕಿನಕೊಪ್ಪ, | 1) ಹೊಸಹಳ್ಳಿ ಗ್ರಾಮವು ಎರಡು ಬಾರಿ ಮುದ್ರಿತವಾಗಿದ್ದು ಒಂದು ಗ್ರಾಮವನ್ನು ಕೈಬಿಡಲಾಗಿದೆ.<br>2) ಚೋರನಯಡೇಹಳ್ಳಿ ಈ ಗ್ರಾಮವನ್ನು ಸೇರ್ಪಡೆ ಮಾಡಲಾಗಿದೆ.<br>3) ಇಂದಿರಾನಗರ ವೀರಾಪುರ ಬದಲು ವೀರಾಪುರ ಎಂದು ಓದಿಕೊಳ್ಳುವುದು. |

| ತಾಲ್ಲೂಕು | ಜಿಲ್ಲಾ ಪಂಚಾಯತಿ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿಯಲ್ಲಿನ ನಮೂದುಗಳಿಗೆ ಮಾಡಿರುವ ತಿದ್ದುಪಡಿ | |
|---|---|---|---|
| | | ದಿನಾಂಕ: 31–10–2015 ರ ಅಧಿಸೂಚನೆಯಲ್ಲಿ ಮುದ್ರಿತವಾಗಿರುವ ಗ್ರಾಮಗಳ ಹೆಸರು | ಸೇರ್ಪಡೆ/ಕೈಬಿಟ್ಟಿರುವುದು/ಮಾರ್ಪಾಡು |
| | | ಕಲ್ಲಿಹಾಳ್(ಬೇ), ಮತ್ತೂರು, ಮಂಡೇನಕೊಪ್ಪ, ಉಂಬಳೇಬೈಲು, ಹುರಳಿಹಳ್ಳಿ, ಗಣಿದಾಳ್, ಸಾರಿಗೆರೆ, ಕೈದೊಟ್ಲು, ಚಿಟ್ಟಿಮನೆ(ಬೇ), ನೈದಿಲೆ(ಬೇ), ಬೆಳಗಲು, ಸಿದ್ದಮ್ಮಾಜಿ ಹೊಸೂರು, ಲಿಂಗಾಪುರ, ಕಾಕನಹಸೂಡಿ. | |
| ಶಿವಮೊಗ್ಗ | 17–ಹಸೂಡಿ | ಬೀರನಹಳ್ಳಿ | ಜೆ.ಬೀರನಹಳ್ಳಿ ಎಂದು ಓದಿಕೊಳ್ಳುವುದು. |
| | | ಹೊಳೆಬೆಳಗಲು | ಬೆಳಗಲು ಎಂದು ಓದಿಕೊಳ್ಳುವುದು. |
| ಶಿವಮೊಗ್ಗ | 18–ಕುಂಸಿ | ಮಾದೇನಕೊಪ್ಪ | ಮಾದೇಕೊಪ್ಪ ಎಂದು ಓದಿಕೊಳ್ಳುವುದು. |
| | | ಸೂಡೂರು (ಕೋರಂಬಳ್ಳಿ) | ಸೂಡೂರು ಎಂದು ಓದಿಕೊಳ್ಳುವುದು. |
| | | ಬೈಲುಕೊಪ್ಪ(ಬೇ) | ಬೈಲುಕೊಪ್ಪ ಎಂದು ಓದಿಕೊಳ್ಳುವುದು. |
| | | ಚನ್ನಹಳ್ಳಿ(ಬೇ) | ಚನ್ನಹಳ್ಳಿ ಎಂದು ಓದಿಕೊಳ್ಳುವುದು. |
| ಭದ್ರಾವತಿ | 22–ಹಿರಿಯೂರು | ಅಂತರಗಂಗೆ, ಉಕ್ಕುಂದ, ಕೆಂಚಮ್ಮನಹಳ್ಳಿ, ದೇವರನರಸೀಪುರ, ಕಾಚಗೊಂಡನಹಳ್ಳಿ, ಅರಳಿಕೊಪ್ಪ, ಗಂಗೂರು, ಬಾಳೆಮಾರನಹಳ್ಳಿ, ತಾರೀಕಟ್ಟೆ, ಚಿಕ್ಕಗೊಪ್ಪೇನಹಳ್ಳಿ, ಬಾರಂದೂರು, ಹಳ್ಳಿಕೆರೆ, ಹಿರಿಯೂರು, ನಂಜಾಪುರ, ಕಾರೇಹಳ್ಳಿ, ಬೊಮ್ಮೇನಹಳ್ಳಿ, ಕಾಳಿಂಗನಹಳ್ಳಿ, ಮಾವಿನಕೆರೆ, ಮೊಸರಹಳ್ಳಿ, ಕೆಂಚೇನಹಳ್ಳಿ, ಹಡ್ಲಘಟ್ಟ, ಯರೇಹಳ್ಳಿ, ಕೊರಲಕೊಪ್ಪ, ಗುಣಿನರಸೀಪುರ. | ದೊಡ್ಡೇರಿ, ಎಮ್ಮೆದೊಡ್ಡಿ, ಗಂಗೂರು, ಬಿಸಿಲಮನೆ, ಬಾಳೆಕಟ್ಟೆ, ಸಿದ್ದರಹಳ್ಳಿ(ಬೇ), ಮಳಲಹರವು(ಬೇ), ವರವಿನಕೆರೆ, ಬಂಡಿಗುಡ್ಡ, ಬೆಳ್ಳಿಗೆರೆ, ಬದನೆಹಾಳ್, ನೆಟ್ಟಕಲ್ಲಹಟ್ಟಿ ಗ್ರಾಮಗಳನ್ನು ಸೇರ್ಪಡೆ ಮಾಡಲಾಗಿದೆ. |
| ಭದ್ರಾವತಿ | 23–ಕೂಡ್ಲಿಗೆರೆ | ಅರಕೆರೆ, ಕಲ್ಲಾಪುರ, ರಂಗಾಪುರ, ನಾಗೋಲಿ, ಹೊಸೂರು, ದಾನವಾಡಿ, ಅರಳಿಹಳ್ಳಿ, ಅತ್ತಿಗುಂದ, ಸೀತಾರಾಮಪುರ, ಬಸಲೀಕಟ್ಟೆ, ದೊಡ್ಡೇರಿ, ಎಮ್ಮೇದೊಡ್ಡಿ, ಗಂಗೂರು, ಬಿಸಿಲಮನೆ, ಬಾಳೆಕಟ್ಟೆ, ಸಿದ್ದರಹಳ್ಳಿ(ಬೇ), ಮಳಲ ಹರವು(ಬೇ), ವರವಿನಕೆರೆ, ಬಂಡಿಗುಡ್ಡ, ಬೆಳ್ಳಿಗೆರೆ, ಬದನೆಹಾಳ್, ನೆಟ್ಟಕಲ್ಲಹಟ್ಟಿ, ಕಾಗೆಕೊಡಮಗ್ಗೆ, ಬಾಬಳ್ಳಿ, ತಿಪ್ಲಾಪುರ, ಕೋಮಾರನಹಳ್ಳಿ, ಗುಡ್ಡದನೇರಲೆಕೆರೆ, ದೇವರಹಳ್ಳಿ, ಕೂಡ್ಲಿಗೆರೆ, ಕೊಟ್ಟದಾಳು(ಬೇ), ನವಿಲೆಬಸವಾಪುರ(ಬೇ), ಹಾಳುಮಲ್ಲಾಪುರ(ಬೇ), ಕೋಡಿಹಳ್ಳಿ, ಕಲ್ಪನಹಳ್ಳಿ, ನಾಗತಿಬೆಳಗಲು, ಹೊಸಹಳ್ಳಿ, ತಳ್ಳಿಕಟ್ಟೆ, ವೀರಾಪುರ, ಗೌಡರಹಳ್ಳಿ, ಮಜ್ಜಿಗೇನಹಳ್ಳಿ. | ದೊಡ್ಡೇರಿ, ಎಮ್ಮೆದೊಡ್ಡಿ, ಗಂಗೂರು, ಬಿಸಿಲಮನೆ, ಬಾಳೆಕಟ್ಟೆ, ಸಿದ್ದರಹಳ್ಳಿ(ಬೇ), ಮಳಲಹರವು(ಬೇ), ವರವಿನಕೆರೆ, ಬಂಡಿಗುಡ್ಡ, ಬೆಳ್ಳಿಗೆರೆ, ಬದನೆಹಾಳ್, ನೆಟ್ಟಕಲ್ಲಹಟ್ಟಿ ಗ್ರಾಮಗಳನ್ನು ಕೈಬಿಡಲಾಗಿದೆ. |
| ತೀರ್ಥಹಳ್ಳಿ | 25–ಕುಪ್ಪಳ್ಳಿ | ಕುಡುಮಲ್ಲಿಗೆ, ಬೆಕ್ಷೆಕೆಂಚಿಗುಡ್ಡೆ, ಬಿಳುವೆ, ಭಾರತೀಪುರ, ಓಡಲಮನೆ, ನೆಲ್ಲಿಸರ, ಅರಳಾಪುರ, ಯಡೇಹಳ್ಳಿ, ಯಡಗುಡ್ಡೆ, ಕಣಬೂರು, ತೀರ್ಥಹಳ್ಳಿ(ಗ್ರಾ), ನೆರಟೂರು, ಸರಳ, ಶಿರುಪತಿ, ಯೋಗಿನರಸಿಪುರ, ಗೇರುವಳ್ಳಿ, ಮುಕ್ತಿಹರಿಹರಪುರ, ಇಕ್ಕೇರಿ ಬೇಳೂರು, ಹೊರಣಿ, ಮೇಲಿನಕುರುವಳ್ಳಿ, ಬುಕ್ಲಾಪುರ, ಹುಣಸವಳ್ಳಿ, ಮೇಳಿಗೆ, ನಂಬಳ, ಕೆಳಕೆರೆ, ದೇವಂಗಿ, ವಾಟಗಾರು, ಬಳಗಟ್ಟೆ, ಇಂಗ್ಲಾದಿ, ಹಡಗಿನಮಕ್ಕಿ, ಬೆಕ್ಕನೂರು, ಆಲ್ಮನೆ, ಬಸವಾನಿ, ಬಂಡಿಗಡಿ, ಗುರುವಳ್ಳಿ, ಹಳುವಾನಿ, ಹೊಸಗ್ರಹಾರ, ಹಾರೋಗೊಳಿಗೆ, ಹರಳಿಮಠ, ಅಂದಗೆರೆ. | ಸಾಲ್ಗಡಿ, ಪಟ್ಲಮನೆ, ಕಟಗಾರು, ಹೊನ್ನೆಕೇರಿ, ಕಬಸೆ, ಕಿರಣಕೆರೆ, ಹೇರಂಭಾಪುರ, ಕೂಳೂರು ಗ್ರಾಮಗಳನ್ನು ಸೇರ್ಪಡೆ ಮಾಡಲಾಗಿದೆ. |

| ತಾಲ್ಲೂಕು | ಜಿಲ್ಲಾ ಪಂಚಾಯತಿ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿಯಲ್ಲಿನ ನಮೂದುಗಳಿಗೆ ಮಾಡಿರುವ ತಿದ್ದುಪಡಿ | |
|---|---|---|---|
| | | **ದಿನಾಂಕ: 31–10–2015 ರ ಅಧಿಸೂಚನೆಯಲ್ಲಿ ಮುದ್ರಿತವಾಗಿರುವ ಗ್ರಾಮಗಳ ಹೆಸರು** | **ಸೇರ್ಪಡೆ/ಕೈಬಿಟ್ಟಿರುವುದು/ಮಾರ್ಪಾಡು** |
| ತೀರ್ಥಹಳ್ಳಿ | 26–ಲಿಂಗಾಪುರ | ಹಣಗೆರೆ, ಕರಕುಚ್ಚಿ, ಶಿರನಲ್ಲಿ, ಬಸವನಗದ್ದೆ, ಅರನಲ್ಲಿ, ಕೊಂಬಿನಕೈ, ಅಲಸೆ, ಶಿಂಗನಬಿದರೆ, ತಳಲೆ, ಕೀಗಡಿ, ಹೆಗಲತ್ತಿ, ಹಳಗ, ಕೂಳುಂಡೆ, ಮೇಲಿನಪಟರವಳ್ಳಿ, ಕೆಳನರಸೆ, ಬೊಮ್ಮನಹಳ್ಳಿ, ಕನ್ನಂಗಿ, ಗರಗ, ಕಿಕ್ಕೇರಿ, ಜೀರಹಳ್ಳಿ, ವೆಂಕನಹಳ್ಳಿ, ಜೋಗಿಕೊಪ್ಪ, ಸಾಲೇಕೊಪ್ಪ, ಅತ್ತಿಗದ್ದೆ, ಯಡವತ್ತಿ, ಕಳವತ್ತಿ, ಮಲ್ಲಾಪುರ, ಆಡಿನಸರ, ಬಾಂಡ್ಯ, ಕುಕ್ಕೆ, ದಾನಸಾಲೆ, ಹೊಸಬೀಡು, ಬೆಟ್ಟಬಸರವಾನಿ, ತೋಟದಕೊಪ್ಪ, ನೇರಲಕೊಪ್ಪ, ಮರಹಳ್ಳಿ, ತೂದೂರು, ಬೇಗುವಳ್ಳಿ, ತ್ಯಾನಂಧೂರು, ಗುತ್ತಿಯಡೇಹಳ್ಳಿ, ಗುಳುವ (ಯಡೇಹಳ್ಳಿಪಾಲ್), ಶೇಡ್ಗಾರು, ಉಬ್ಬೂರು, ಕುಚ್ಚಲು, ಬೈಲುಬಡಗಿ, ಕಾವೇರಿ, ಲಿಂಗಾಪುರ, ಕಣಗಲಕೊಪ್ಪ, ಹಲಸವಾಳ, ಜಂಬುವಳ್ಳಿ, ಹೆಮ್ಮಕ್ಕಿ, ಸಿಂಧುವಾಡಿ, ಬೆಜ್ಜವಳ್ಳಿ, ಹಿರೇತೋಟ, ಮಾಳೂರು, ಶೀಕೆ, ನಾಯದವಳ್ಳಿ, ಕುಡುವಳ್ಳಿ, ನಂಡಗದ್ದೆ, ಕೂಡಿಗೆ, ಕಸಗಾರು, ಹಾಲುಮಹಿಷಿ, ಮಹಿಷಿ, ದಬ್ಬಣಗದ್ದೆ, ಹೆದ್ದೂರು, ಕ್ಯಾದಿಗೆರೆ, ಮುನ್ನೂರಹಳ್ಳಿ, ಹೊಳೆಕೊಪ್ಪ, ಮುಂಡುವಳ್ಳಿ, ಶೇಡ್ಗಾರು, ಅಂಗಳಕೊಡಿಗೆ, ಕೊಳಗಿ, ಮೃಗವಧೆ, ಮಾಣಿಕೊಪ್ಪ, ಹಸಂದೂರು, ಬೆಳ್ಳಂಗಿ, ತುಂಬ್ರಮನೆ, ಸಾಲ್ಗಡಿ, ಪಟ್ಲಮನೆ, ಕಟಗಾರು, ಹೊನ್ನೆಕೇರಿ, ಕಬಸೆ, ಕಿರಣಕೆರೆ, ಹೇರಂಭಾಪುರ, ಕೂಳೂರು. | ಸಾಲ್ಗಡಿ, ಪಟ್ಲಮನೆ, ಕಟಗಾರು, ಹೊನ್ನೆಕೇರಿ, ಕಬಸೆ, ಕಿರಣಕೆರೆ, ಹೇರಂಭಾಪುರ, ಕೂಳೂರು ಗ್ರಾಮಗಳನ್ನು ಕೈಬಿಡಲಾಗಿದೆ. |
| ಸಾಗರ | 30–ಕೆಳದಿ | ಬ್ರಾಹಣ ಮಂಚಾಲೆ | ಬ್ರಾಹ್ಮಣ ಮಂಚಾಲೆ ಎಂದು ಓದಿಕೊಳ್ಳುವುದು. |

ಆದೇಶಾನುಸಾರ

**ಆರ್. ಚಂದ್ರಶೇಖರ್**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (25 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**



| ಭಾಗ- **III** | ಬೆಂಗಳೂರು, ಮಂಗಳವಾರ, ನವೆಂಬರ್ ೨೪, ೨೦೧೫ (ಮಾರ್ಗಶಿರ ೦೩, ಶಕ ವರ್ಷ ೧೯೩೭) | ನಂ. ೧೪೦೯ |
|---|---|---|
| **Part–III** | ***Bengaluru, Tuesday, November 24, 2015 (Margashira 03, Shaka Varsha 1937)*** | **No. 1409** |



**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

**ಕೆ.ಎಸ್.ಸಿ.ಎಂ.ಎಫ್. ಕಟ್ಟಡ (ಹಿಂಭಾಗ), ನಂ.8, 1ನೇ ಮಹಡಿ, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು–560052.**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ರಾಚುಆ/79/ಟಿಜೆಡ್‌ಪಿ/2015, ದಿನಾಂಕ: 23–11–2015**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 (1993 ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ರ 163 ನೇ ಪ್ರಕರಣ ಮತ್ತು ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1899 (1899 ರ ಕರ್ನಾಟಕ ಅಧಿನಿಯಮ ಸಂಖ್ಯೆ 3) ರ ಪ್ರಕರಣ 21 ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಜ್ಯ ಚುನಾವಣಾ ಆಯೋಗವು **ರಾಯಚೂರು ಜಿಲ್ಲಾ ಪಂಚಾಯತಿಗೆ** ಸಂಬಂಧಿಸಿದಂತೆ, ದಿನಾಂಕ: 31–10–2015 ರಂದು ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ರಾಚುಆ/79/ಟಿಜೆಡ್‌ಪಿ/2015 ರಲ್ಲಿನ ಕೋಷ್ಠಕದ (2) ನೇ ಅಂಕಣದಲ್ಲಿ **ಮಾನ್ವಿ ತಾಲ್ಲೂಕಿನ 19–ಪೋತ್ನಾಳ** ಜಿಲ್ಲಾ ಪಂಚಾಯತ್ ಪ್ರಾದೇಶಿಕ ಚುನಾವಣಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ನಮೂದಿಸಿರುವ ಗ್ರಾಮಗಳಲ್ಲಿ **ಗೂಗೇಹೆಬ್ಬಾಳ** ಗ್ರಾಮವನ್ನು ಅಲ್ಲಿಂದ ತೆಗೆದು **20–ತೋರಣದಿನ್ನಿ** ಜಿಲ್ಲಾ ಪಂಚಾಯತ್ ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿಗೆ ಸೇರ್ಪಡೆ ಮಾಡಲಾಗಿದೆ.

ಆದೇಶಾನುಸಾರ

**ಆರ್. ಚಂದ್ರಶೇಖರ್**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (25 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ


| ಭಾಗ– IV-A | ಬೆಂಗಳೂರು, ಬುಧವಾರ, ನವೆಂಬರ್ ೨೫, ೨೦೧೫ (ಮಾರ್ಗಶಿರ ೦೪, ಶಕ ವರ್ಷ ೧೯೩೭) | ನಂ. ೧೪೧೧ |
|---|---|---|
| Part–IV-A | Bengaluru, Wednesday, November 25, 2015 (Margashira 04, Shaka Varsha 1937 | No. 1411 |


ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ಗ್ರಾಅಪ 146 ಜಿಪಸ 2015, ಬೆಂಗಳೂರು, ದಿನಾಂಕ: 25–11–2015**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ (ಕರ್ನಾಟಕ 1993ರ ಅಧಿನಿಯಮ ಸಂಖ್ಯೆ 14) ಪ್ರಕರಣ 311(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು, ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ (ಚುನಾವಣೆ ನಡೆಸುವ) ನಿಯಮಗಳು 1993ಕ್ಕೆ ತಿದ್ದುಪಡಿ ಮಾಡಲು ಉದ್ದೇಶಿಸಿದ್ದು, ಈ ಕೆಳಕಂಡಂತೆ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) (ತಿದ್ದುಪಡಿ) ನಿಯಮಗಳು 2015 ಕರಡು ನಿಯಮಗಳನ್ನು ಪ್ರಕರಣ 311ರಲ್ಲಿ ಅಗತ್ಯ ಪಡಿಸಿದಂತೆ, ಪ್ರಕಟಿಸಲಾಗಿದೆ ಮತ್ತು ಇದರಿಂದ ಬಾದಿತರಾಗುವ ಎಲ್ಲಾ ವ್ಯಕ್ತಿಗಳ ಗಮನಕ್ಕೆ ತರಲಾಗಿದೆಹಾಗೂ ಸದರಿ ಕರಡು ನಿಯಮಗಳು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಈ ಕರಡು ನಿಯಮಗಳಿಗೆ ಸಂಬಂಧಿಸಿದಂತೆ, ಸರ್ಕಾರದಲ್ಲಿ ಆಕ್ಷೇಪಣೆ/ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ, 3ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು–560001 ಇವರಿಗೆ ಲಿಖಿತವಾಗಿ ಸಲ್ಲಿಸಬಹುದಾಗಿದೆ.

ಕರಡು ನಿಯಮಗಳು

1. **ಚಿಕ್ಕ ಹೆಸರು ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು **ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) (ತಿದ್ದುಪಡಿ) ನಿಯಮಗಳು, 2015** ಎಂದು ಕರೆಯತಕ್ಕದ್ದು.

   (2) ಅವು ಸರ್ಕಾರದ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.
2. **21ನೇ ನಿಯಮದ ತಿದ್ದುಪಡಿ:–** ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು 1993 (ಈ ಮುಂದೆ ಮೂಲ ನಿಯಮಗಳೆಂದು ಉಲ್ಲೇಖಿಸಲಾಗಿದೆ)ರ 21ನೇ ನಿಯಮದಲ್ಲಿ ಖಂಡ (ಸಿ)ಯ ತರುವಾಯ, ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:–

   "(ಡಿ) ಬೇರೆ ರಾಜ್ಯದಲ್ಲಿ ಅಥವಾ ಬೇರೆ ರಾಜ್ಯಗಳಲ್ಲಿ ನೊಂದಾಯಿತ/ ಮಾನ್ಯತೆ ಪಡೆದ ರಾಜಕೀಯ ಪಕ್ಷಗಳ ಚಿಹ್ನೆಗಳ ಪಟ್ಟಿ;"
3. **22ನೇ ನಿಯಮದ ತಿದ್ದುಪಡಿ:–** ಮೂಲ ನಿಯಮಗಳ 22ನೇ ನಿಯಮದಲ್ಲಿನ, ಉಪ ನಿಯಮ(5)ರ "ವಿವರಣೆಯ" ತರುವಾಯ, ಈ ಮುಂದಿನ ಉಪ ನಿಯಮವನ್ನು ಸೇರಿಸತಕ್ಕದ್ದು, ಎಂದರೆ:–

   "(6) ಒಂದು ರಾಜಕೀಯ ಪಕ್ಷವು ಬೇರೆ ರಾಜ್ಯದಲ್ಲಿ ಅಥವಾ ಬೇರೆ ರಾಜ್ಯಗಳಲ್ಲಿ ನೊಂದಾಯಿತ/ಮಾನ್ಯತೆ ಪಡೆದ ಪಕ್ಷವಾಗಿದ್ದು, ಕರ್ನಾಟಕ ರಾಜ್ಯದಲ್ಲಿ ಅದು ನೋಂದಾಯಿತ/ಮಾನ್ಯತೆ ಪಡೆಯದ ರಾಜಕೀಯ ಪಕ್ಷವಾಗಿದ್ದರೆ ಅಂತಹ ಪಕ್ಷವು ಕರ್ನಾಟಕ ರಾಜ್ಯದಲ್ಲಿ ಚುನಾವಣೆಗೆ ಅಭ್ಯರ್ಥಿಗಳನ್ನು ನಿಲ್ಲಿಸಿದಲ್ಲಿ, ಆ ಪಕ್ಷದ/ಪಕ್ಷಗಳ ಅಭ್ಯರ್ಥಿಗಳಿಗೆ ಇತರೆ ರಾಜ್ಯ/ರಾಜ್ಯಗಳಲ್ಲಿ ನೀಡಿರುವ ಚಿಹ್ನೆಯನ್ನೇ, ಅಂತಹ ಚಿಹ್ನೆಯ ಮುಕ್ತ ಚಿಹ್ನೆಗಳ ಪಟ್ಟಿಯಲ್ಲಿ ಇಲ್ಲದಿದ್ದರೂ ಸಹ, ಈ ಕೆಳಗಿನ ಷರತ್ತುಗಳನ್ನು ಪೂರೈಸಿದಲ್ಲಿ, ನೀಡಬಹುದು. ಅಂದರೆ:–

   (ಅ) ಅಂತಹ ಪಕ್ಷಗಳ ರಾಜ್ಯಾಧ್ಯಕ್ಷರು, ರಾಜ್ಯ ಚುನಾವಣಾ ಆಯೋಗವು, ಚುನಾವಣಾ ವೇಳಾಪಟ್ಟಿಯನ್ನು ಪ್ರಕಟಿಸಿದ 3(ಮೂರು)ದಿನಗಳೊಳಗೆ ತಮ್ಮ ಪಕ್ಷದಿಂದ ಚುನಾವಣೆಗೆ ನಿಲ್ಲುವ ಅಭ್ಯರ್ಥಿಗಳಿಗೆ ಇಂತಹುದೇ ಚಿಹ್ನೆಯನ್ನೇ ನೀಡುವಂತೆ ಕೋರಿ, ಮನವಿ ಅರ್ಜಿಯನ್ನು ರಾಜ್ಯ ಚುನಾವಣಾ ಆಯೋಗಕ್ಕೆ ಸಲ್ಲಿಸತಕ್ಕದ್ದು.

   (ಆ) ಬೇರೆ ಬೇರೆ ರಾಜ್ಯಗಳಲ್ಲಿ ಮಾನ್ಯತೆ ಪಡೆದ ಒಂದಕ್ಕಿಂತ ಹೆಚ್ಚು ಪಕ್ಷಗಳು, ಒಂದೇ ಚಿಹ್ನೆಯನ್ನು ತಮ್ಮ ಪಕ್ಷದ ಮೀಸಲು ಚಿಹ್ನೆಯನ್ನಾಗಿ ಪಡೆದುಕೊಂಡಿದ್ದಲ್ಲಿ, ಅಂತಹ ಪಕ್ಷಗಳು ತಮ್ಮ ಪಕ್ಷದ ಅಭ್ಯರ್ಥಿಗಳಿಗೆ ಅದೇ ಚಿಹ್ನೆಯನ್ನು ನೀಡಲು ಕೋರಿ ಮನವಿ ಅರ್ಜಿ ಸಲ್ಲಿಸಿದಲ್ಲಿ, ರಾಜ್ಯ ಚುನಾವಣಾ ಆಯೋಗವು ಚೀಟಿ ಎತ್ತುವ ಮೂಲಕ ಚಿಹ್ನೆಯನ್ನು ಅಂತಹ

ಪಕ್ಷದ ಅಭ್ಯರ್ಥಿಗಳಿಗೆ ಹಂಚಿಕೆ ಮಾಡಿ ಆದೇಶಿಸತಕ್ಕದ್ದು. ಉಳಿದ ಇತರೆ ಪಕ್ಷ/ಪಕ್ಷಗಳ ಅಭ್ಯರ್ಥಿಗಳು ಮುಕ್ತ ಚಿಹ್ನೆಯಲ್ಲಿನ ಯಾವುದಾದರೂ ಒಂದು ಚಿಹ್ನೆಯನ್ನು ಆಯ್ಕೆ ಮಾಡಿಕೊಳ್ಳತಕ್ಕದ್ದು.

(ಇ) ಯಾವ ಪಕ್ಷವು ತನ್ನನ್ನು ಅಭ್ಯರ್ಥಿಯನ್ನಾಗಿ ನಿಲ್ಲಿಸಿದೆ ಎಂಬುದನ್ನು ನಾಮಪತ್ರದಲ್ಲಿ ಅಭ್ಯರ್ಥಿಯು ಘೋಷಣೆ ಮಾಡತಕ್ಕದ್ದು. ಆದರೆ, ಅದಕ್ಕೆ ವ್ಯತಿರಿಕ್ತವಾಗುವಂತಹ ಗಮನಾರ್ಹ ಅಂಶಗಳು ನಾಮಪತ್ರದಲ್ಲಾಗಲೀ ಅಥವಾ ನಮೂನೆ "ಸಿ" ಅಥವಾ "ಡಿ" ಯಲ್ಲಿ ಕಂಡುಬಂದಲ್ಲಿ, ಅಂತಹ ಅಭ್ಯರ್ಥಿಗೆ ಕಾಯ್ದಿರಿಸಿದ ಚಿಹ್ನೆ ನೀಡಲಾಗುವುದಿಲ್ಲ ಮತ್ತು ಅಂತಹ ಅಭ್ಯರ್ಥಿಗಳಿಗೆ ಮುಕ್ತ ಚಿಹ್ನೆಗಳ ಪಟ್ಟಿಯಿಂದ ಚುನಾವಣಾಧಿಕಾರಿಯು ಚಿಹ್ನೆಯನ್ನು ಹಂಚಿಕೆ ಮಾಡತಕ್ಕದ್ದು.

(ಈ) ಅರ್ಜಿಯನ್ನು ತಿರಸ್ಕರಿಸಲು ಯಾವುದೇ ಸಮಂಜಸವಾದ ಕಾರಣಗಳು ಇಲ್ಲವೆಂದು ರಾಜ್ಯ ಚುನಾವಣೆ ಆಯೋಗ ಮನವರಿಕೆ ಮಾಡಿಕೊಳ್ಳತಕ್ಕದ್ದು, ಆದರೆ ಹಂಚಿಕೆ ಮಾಡಲಾದ ಚಿಹ್ನೆಯನ್ನೇ ಮುಂದೆ ನಡೆಯುವ ಯಾವುದೇ ಇತರೆ ಚುನಾವಣೆಗೆ ನೀಡುವಂತೆ ಹಕ್ಕು ಪ್ರತಿಪಾದಿಸುವಂತಿಲ್ಲ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಬಿ. ಧೋತ್ರೆ**
ಸರ್ಕಾರದ ಅಧೀನ ಕಾರ್ಯದರ್ಶಿ(ಜಿ.ಪಂ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು.** (ಪಿ೩) (೨೦೦ ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ– ***IV-A*** | ಬೆಂಗಳೂರು, ಗುರುವಾರ, ನವೆಂಬರ್ ೨೬, ೨೦೧೫ (ಮಾರ್ಗಶಿರ ೦೫, ಶಕ ವರ್ಷ ೧೯೩೭) | ನಂ. ೧೪೧೨ |
| ***Part–IV-A*** | ***Bengaluru, Thursday, November 26, 2015 (Margashira 05, Shaka Varsha 1937)*** | ***No. 1412*** |


**ಕರ್ನಾಟಕ ವಿಧಾನ ಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ/ಶಾರಶಾ/481/ಸನಿಬ/2015, ಬೆಂಗಳೂರು, ದಿನಾಂಕ: 25.11.2015**

ಹೆಬ್ಬಾಳ ವಿಧಾನಸಭಾ ಕ್ಷೇತ್ರ ಸಂಖ್ಯೆ:158 ರಿಂದ ಹದಿನಾಲ್ಕನೇ ವಿಧಾನಸಭೆಗೆ ಚುನಾಯಿತರಾಗಿದ್ದ ಶ್ರೀ ಆರ್. ಜಗದೀಶ್ ಕುಮಾರ್ ಅವರು ದಿನಾಂಕ: 23.11.2015ರಂದು ನಿಧನರಾಗಿರುವುದರಿಂದ ವಿಧಾನಸಭೆಯಲ್ಲಿ ಒಂದು 'ಸದಸ್ಯ' ಸ್ಥಾನ ತೆರವಾಗಿರುತ್ತದೆ.

**ಎಸ್.ವೈ. ಕುಳಗೇರಿ**
ಕಾರ್ಯದರ್ಶಿ(ಪ್ರ)
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY SECRETARIAT**

**NOTIFICATION**

**No. LAS/LEG/481/MD/2015, Bengaluru, Dated: 25.11.2015**

Sri R. JAGADEESHKUMAR, Member, Legislative Assembly elected to the Fourteenth Legislative Assembly from Hebbal Constituency, No.158, expired on 23rd November, 2015 and thus a vacancy has arisen in the Karnataka Legislative Assembly.

**S.Y. KULAGERI**
Secretary (I/c)
Karnataka Legislative Assembly

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (50 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ



| ಭಾಗ- *V* | ಬೆಂಗಳೂರು, ಗುರುವಾರ, ನವೆಂಬರ್ ೨೬, ೨೦೧೫ (ಮಾರ್ಗಶಿರ ೦೫, ಶಕ ವರ್ಷ ೧೯೩೭) | ನಂ. ೧೪೧೩ |
|---|---|---|
| ***Part–V*** | ***Bengaluru, Thursday, November 26, 2015 (Margashira 05, Shaka Varsha 1937)*** | ***No. 1413*** |



**ಸಾರ್ವಜನಿಕ ಶಿಕ್ಷಣ ಇಲಾಖೆ,**
**ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ]**
**ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ದಕ್ಷಿಣ ಜಿಲ್ಲೆ, ಬೆಂಗಳೂರು ದಕ್ಷಿಣ**
**: ತಿದ್ದುಪಡಿ ನೇಮಕಾತಿ ಅಧಿಸೂಚನೆ :**
**ಸಂಖ್ಯೆ: ಆ2ಪ್ರಾಶಾ.ಶಿ:ನೇಮಕ:18/2014–15, ದಿನಾಂಕ:26ನೇ ನವೆಂಬರ್ 2015**

**ವಿಷಯ:** 2014–15ನೇ ಸಾಲಿನಲ್ಲಿ 1–5, ಹಾಗೂ 6–8ನೇ ತರಗತಿ ಸರ್ಕಾರಿ ಪ್ರಾಥಮಿಕ ಶಾಲಾ ಸಹಶಿಕ್ಷಕರ ಮತ್ತು ಸಹಶಿಕ್ಷಕಿ ವೃಂದದ ಹುದ್ದೆಗಳನ್ನು ನೇರ ನೇಮಕಾತಿಯಿಂದ ಜಿಲ್ಲಾ ಮಟ್ಟದ [ಸಂಯುಕ್ತ ಸ್ಪರ್ಧಾತ್ಮಕ] ಪರೀಕ್ಷೆಯ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:**
1]. ಸರ್ಕಾರದ ಅಧಿಕೃತ ಪ್ರಕಟಣೆ ಸಂ: ಡಿಪಿಎಆರ್:41:ಎಸ್ಆರ್ಇ:2001, ದಿನಾಂಕ:09.08.2001.
2] ಸರ್ಕಾರಿ ಆದೇಶ ಸಂ:ಸಿಆಸುಇ:08:ಸಹಿಮ:1995, ದಿನಾಂಕ:20.06.1995.
3] ಸರ್ಕಾರಿ ಆದೇಶ ಸಂ:ಸಿಆಸುಇ:97:ಸನೆನಿ:2002, ದಿನಾಂಕ:22.11.2002.
4] ಸರ್ಕಾರಿ ಆದೇಶ ಸಂ:ಸಿಆಸುಇ:53:ಸೇನೇನಿ:2007, ದಿನಾಂಕ:04.01.2008.
5] ಸರ್ಕಾರಿ ಆದೇಶ ಸಂ:ಇಡಿ:21:ಯೋಯೋಕ:2010, ದಿನಾಂಕ:02.11.2012.
6] ಸರ್ಕಾರಿ ಆದೇಶ ಸಂ:ಇಡಿ:238:ಪಿಬಿಐ:2012, ದಿನಾಂಕ:21.01.2013.
7] ಸರ್ಕಾರಿ ಆದೇಶ ಸಂ:ಸಿಆಸುಇ:50:ಎಸ್.ಆರ್.ಆರ್.:2007, ದಿನಾಂಕ:26.07.2011
8] ಸರ್ಕಾರಿ ಆದೇಶ ಸಂ :ಸಿಆಸುಇ:54:ಎಸ್.ಆರ್.ಆರ್.:2012,ದಿನಾಂಕ:07.08.2012
9] ಸರ್ಕಾರಿ ಆದೇಶ ಸಂ :ಸಿಆಸುಇ: 43: ಹೆಚ್‌ಕೆಸಿ 2013,ದಿನಾಂಕ:29.01.2014
10] ಸರ್ಕಾರಿ ಆದೇಶ ಸಂ : ಸಿಆಸುಇ 33 ಹೈಕಉ 2014,ದಿನಾಂಕ: 10.04.2014
11] ಸರ್ಕಾರಿ ಆದೇಶ ಸಂ:ಇಡಿ:626:ಪಿಬಿಎಸ್:2014, ದಿನಾಂಕ:31.01.2015
12] ಈ ಕಛೇರಿ ನೇಮಕಾತಿ ಅಧಿಸೂಚನೆ ಸಮ ಸಂಖ್ಯೆ ದಿನಾಂಕ:23.03.2015
13] ಸರ್ಕಾರದ ಆದೇಶ ಸಂಖ್ಯೆ : ಇಡಿ 626 ಪಿಬಿಎಸ್ 2014, ದಿನಾಂಕ: 21.11.2015.
14] ಸರ್ಕಾರದ ಆದೇಶ ಸಂಖ್ಯೆ :ಇಡಿ 626 ಪಿಬಿಎಸ್ 2014 ದಿನಾಂಕ:25.11.2015
15] ಆಯುಕ್ತರು, ಸಾಶಿಇ, ಬೆಂಗಳೂರು ಇವರ ಕಛೇರಿ ಪತ್ರ ಸಂಖ್ಯೆ : ಸಿ3(1) ಪ್ರಾಶಾಶಿ.ನೇ 02/2014–15 ದಿನಾಂಕ:25.11.2015

ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಪರೀಕ್ಷೆ ಮೂಲಕ ಅಂದರೆ ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ [ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್][ರೆಕ್ರೂಟ್‌ಮೆಂಟ್][ಅಮೆಂಡ್‌ಮೆಂಟ್]ರೂಲ್ಸ್–2001[ಸಂಖ್ಯೆ:ಡಿಪಿಎಆರ್:41:ಎಸ್ಆರ್ಇ:2001, ದಿನಾಂಕ:09.08.2001]ರ ಹಾಗೂ ಸರ್ಕಾರದ ಕಾರ್ಯಕಾರಿ ಆದೇಶ ಸಂಖ್ಯೆ: ಇಡಿ:626:ಪಿಬಿಎಸ್:2014, ದಿನಾಂಕ:31.01.2015ರ ನಿಯಮಗಳನ್ವಯ ಆಯ್ಕೆ ಮಾಡಲು ಉಲ್ಲೇಖ–12 ರನ್ವಯ ನೇಮಕಾತಿ ಅಧಿಸೂಚನೆಯನ್ನು ಹೊರಡಿಸಲಾಗಿತ್ತು.

ಸರ್ಕಾರದಿಂದ ಉಲ್ಲೇಖ–11 ರನ್ವಯ ಹೊರಡಿಸಲಾದ ಕಾರ್ಯಕಾರಿ ಆದೇಶದಲ್ಲಿ 6 ರಿಂದ 8ನೇ ತರಗತಿಯ ಆಂಗ್ಲ ಭಾಷಾ ಶಿಕ್ಷಕರ ಹುದ್ದೆಗೆ ನಿಗದಿಪಡಿಸಲಾದ ಶೈಕ್ಷಣಿಕ ವಿದ್ಯಾರ್ಹತೆಯನ್ನು ಈ ಕೆಳಗಿನಂತೆ ನಿಗದಿಪಡಿಸಲಾಗಿತ್ತು.

(b) For the Language Assistant in English the candidate who holds a Post-Graduate Diploma Certificate in English Language from Regional Institute of English South India shall also be considered eligible for appointment.

ಆದರೆ ಉಲ್ಲೇಖ–14 ರನ್ವಯ ಹೊರಡಿಸಲಾದ ಸರ್ಕಾರಿ ಆದೇಶದನ್ವಯ ಉಲ್ಲೇಖ–11ರ ಆದೇಶದ ಅನುಬಂಧದ Minimum Qualification ಕಾಲಂ–5 ರಡಿ ಕ್ರಮ ಸಂಖ್ಯೆ (3)ರ Graduate Higher Primary School Assistant Teacher for classes VI to VII (English) ರ ಅಡಿಯಲ್ಲಿ ಬರುವ ಈ ಕೆಳಕಂಡ ಉದ್ಧೃತ ಭಾಗವನ್ನು ಕೈಬಿಡಲಾಗಿದೆ.

"b) For the Language Assistant in English the candidate who holds a Post Graduate Diploma Certificate in English Language From Regional Institute of English South India shall also be considered eligible for Appointment"

ಅದರಂತೆ ಉಲ್ಲೇಖ–13 ರನ್ವಯ ಹೊರಡಿಸಲಾದ ಕಾರ್ಯಕಾರಿ ಆದೇಶದಲ್ಲಿ ವಿಸ್ತರಿಸಲಾದ 6 ತಿಂಗಳ ಅವಧಿಯಂತೆ ಮತ್ತು ಉಲ್ಲೇಖ–14ರನ್ವಯ ಹೊರಡಿಸಲಾದ ಸರ್ಕಾರಿ ಆದೇಶದಲ್ಲಿ ವಿವರಿಸಿದಂತೆ ವಿದ್ಯಾರ್ಹತೆಯನ್ನು ಅನುಸರಿಸಿ, ಪ್ರಸ್ತುತ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ಆಯ್ಕೆ ಪ್ರಕ್ರಿಯೆಯನ್ನು ಮುಂದುವರೆಸುತ್ತಾ, ಆಂಗ್ಲಭಾಷಾ ಶಿಕ್ಷಕರ ಹುದ್ದೆಗೆ ಉಲ್ಲೇಖ–11ರಲ್ಲಿ ನಿಗದಿಪಡಿಸಲಾದ ವಿದ್ಯಾರ್ಹತೆಯನ್ನು, ಉಲ್ಲೇಖ–14ರನ್ವಯ ಆದೇಶಿಸಿದ ಅಂಶಗಳಂತೆ ತಿದ್ದುಪಡಿ ಮಾಡಿ ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ.

ಪದ್ಮಾವತಿ. ಕೆ
ಆಯ್ಕೆ ಪ್ರಾಧಿಕಾರಿಗಳು ಹಾಗೂ
ಉಪನಿರ್ದೇಶಕರು(ಆಡಳಿತ)
ಸಾರ್ವಜನಿಕ ಶಿಕ್ಷಣ ಇಲಾಖೆ
ಬೆಂಗಳೂರು ದಕ್ಷಿಣ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿಆ) (100 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ- V | ಬೆಂಗಳೂರು, ಗುರುವಾರ, ನವೆಂಬರ್ ೨೬, ೨೦೧೫ (ಮಾರ್ಗಶಿರ ೦೫, ಶಕ ವರ್ಷ ೧೯೩೭) | ನಂ. ೧೪೧೪ |
|---|---|---|
| *Part–V* | *Bengaluru, Thursday, November 26, 2015 (Margashira 05, Shaka Varsha 1937)* | *No. 1414* |


*ಸಾರ್ವಜನಿಕ ಶಿಕ್ಷಣ ಇಲಾಖೆ,*

**ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ]**

**ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ಜಿಲ್ಲೆ,**

**ಬೆಂಗಳೂರು ಉತ್ತರ.**

**: ತಿದ್ದುಪಡಿ ನೇಮಕಾತಿ ಅಧಿಸೂಚನೆ :**

**ಸಂಖ್ಯೆ: ಸಿ1ಸಪ್ರಾಶಾಶಿ/ನೇಮಕ 24/2014–15, ದಿನಾಂಕ: 26ನೇ ನವೆಂಬರ್ 2015**

**ವಿಷಯ:** 2014–15ನೇ ಸಾಲಿನಲ್ಲಿ 1–5, ಹಾಗೂ 6–8ನೇ ತರಗತಿ ಸರ್ಕಾರಿ ಪ್ರಾಥಮಿಕ ಶಾಲಾ ಸಹಶಿಕ್ಷಕರ ಮತ್ತು ಸಹಶಿಕ್ಷಕಿ ವೃಂದದ ಹುದ್ದೆಗಳನ್ನು ನೇರ ನೇಮಕಾತಿಯಿಂದ ಜಿಲ್ಲಾ ಮಟ್ಟದ [ಸಂಯುಕ್ತ ಸ್ಪರ್ಧಾತ್ಮಕ] ಪರೀಕ್ಷೆಯ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಕೃತ ಪ್ರಕಟಣೆ ಸಂ: ಡಿಪಿಎಆರ್:41:ಎಸ್ಆರ್ಇ:2001, ದಿನಾಂಕ:09.08.2001

2] ಸರ್ಕಾರಿ ಆದೇಶ ಸಂ:ಸಿಆಸುಇ:08:ಸಹಿಮ:1995, ದಿನಾಂಕ:20.06.1995.

3] ಸರ್ಕಾರಿ ಆದೇಶ ಸಂ:ಸಿಆಸುಇ:97:ಸನೆನಿ:2002, ದಿನಾಂಕ:22.11.2002.

4] ಸರ್ಕಾರಿ ಆದೇಶ ಸಂ:ಸಿಆಸುಇ:53:ಸೇನೇನಿ:2007, ದಿನಾಂಕ:04.01.2008.

5] ಸರ್ಕಾರಿ ಆದೇಶ ಸಂ:ಇಡಿ:21:ಯೋಯೋಕ:2010, ದಿನಾಂಕ:02.11.2012.

6] ಸರ್ಕಾರಿ ಆದೇಶ ಸಂ:ಇಡಿ:238:ಪಿಬಿಐ:2012, ದಿನಾಂಕ:21.01.2013.

7] ಸರ್ಕಾರಿ ಆದೇಶ ಸಂ:ಸಿಆಸುಇ:50:ಎಸ್.ಆರ್.ಆರ್.:2007, ದಿನಾಂಕ:26.07.2011

8] ಸರ್ಕಾರಿ ಆದೇಶ ಸಂ :ಸಿಆಸುಇ:54:ಎಸ್.ಆರ್.ಆರ್.:2012,ದಿನಾಂಕ:07.08.2012

9] ಸರ್ಕಾರಿ ಆದೇಶ ಸಂ :ಸಿಆಸುಇ: 43: ಹೆಚ್‌ಕೆಸಿ 2013,ದಿನಾಂಕ:29.01.2014

10] ಸರ್ಕಾರಿ ಆದೇಶ ಸಂ : ಸಿಆಸುಇ 33 ಹೈಕಉ 2014,ದಿನಾಂಕ: 10.04.2014

11] ಸರ್ಕಾರಿ ಆದೇಶ ಸಂ:ಇಡಿ:626:ಪಿಬಿಎಸ್:2014, ದಿನಾಂಕ:31.01.2015

12] ಈ ಕಛೇರಿ ನೇಮಕಾತಿ ಅಧಿಸೂಚನೆ ಸಮ ಸಂಖ್ಯೆ ದಿನಾಂಕ:23.03.2015

13] ಸರ್ಕಾರದ ಆದೇಶ ಸಂಖ್ಯೆ : ಇಡಿ 626 ಪಿಬಿಎಸ್ 2014 ದಿನಾಂಕ: 21.11.2015.

14] ಸರ್ಕಾರದ ಆದೇಶ ಸಂಖ್ಯೆ :ಇಡಿ 626 ಪಿಬಿಎಸ್ 2014 ದಿನಾಂಕ:25.11.2015

15] ಆಯುಕ್ತರು, ಸಾಶಿಇ, ಬೆಂಗಳೂರು ಇವರ ಕಛೇರಿ ಪತ್ರ ಸಂಖ್ಯೆ : ಸಿ3(1) ಪ್ರಾಶಾಶಿ.ನೇ 02/2014–15 ದಿನಾಂಕ:25.11.2015

ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಪರೀಕ್ಷೆ ಮೂಲಕ ಅಂದರೆ ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ [ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್][ರೆಕ್ರೂಟ್‌ಮೆಂಟ್][ಅಮೆಂಡ್‌ಮೆಂಟ್]ರೂಲ್ಸ್–2001[ಸಂಖ್ಯೆ:ಡಿಪಿಎಆರ್:41:ಎಸ್ಆರ್ಇ:2001, ದಿನಾಂಕ:09.08.2001]ರ ಹಾಗೂ ಸರ್ಕಾರದ ಕಾರ್ಯಕಾರಿ ಆದೇಶ ಸಂಖ್ಯೆ: ಇಡಿ:626:ಪಿಬಿಎಸ್:2014, ದಿನಾಂಕ:31.01.2015ರ ನಿಯಮಗಳನ್ವಯ ಆಯ್ಕೆ ಮಾಡಲು ಉಲ್ಲೇಖ–12 ರನ್ವಯ ನೇಮಕಾತಿ ಅಧಿಸೂಚನೆಯನ್ನು ಹೊರಡಿಸಲಾಗಿತ್ತು.

ಸರ್ಕಾರದಿಂದ ಉಲ್ಲೇಖ–11 ರನ್ವಯ ಹೊರಡಿಸಲಾದ ಕಾರ್ಯಕಾರಿ ಆದೇಶದಲ್ಲಿ 6 ರಿಂದ 8ನೇ ತರಗತಿಯ ಆಂಗ್ಲ ಭಾಷಾ ಶಿಕ್ಷಕರ ಹುದ್ದೆಗೆ ನಿಗಧಿಪಡಿಸಲಾದ ಶೈಕ್ಷಣಿಕ ವಿದ್ಯಾರ್ಹತೆಯನ್ನು ಈ ಕೆಳಗಿನಂತೆ ನಿಗಧಿಪಡಿಸಲಾಗಿತ್ತು.

(b) For the Language Assistant in English the candidate who holds a Post-Graduate Diploma Certificate in English Language from Regional Institute of English South India shall also be considered eligible for appointment.

ಆದರೆ ಉಲ್ಲೇಖ–14 ರನ್ವಯ ಹೊರಡಿಸಲಾದ ಸರ್ಕಾರಿ ಆದೇಶದನ್ವಯ ಉಲ್ಲೇಖ–11ರ ಆದೇಶದ ಅನುಬಂಧದ Minimum Qualification ಕಾಲಂ–5 ರಡಿ ಕ್ರಮ ಸಂಖ್ಯೆ (3)ರ Graduate Higher Primary School Assistant Teacher for classes VI to VII (English) ರ ಅಡಿಯಲ್ಲಿ ಬರುವ ಈ ಕೆಳಕಂಡ ಉದ್ಧೃತ ಭಾಗವನ್ನು ಕೈಬಿಡಲಾಗಿದೆ.

"b) For the Language Assistant in English the candidate who holds a Post Graduate Diploma Certificate in English Language From Regional Institute of English South India shall also be considered eligible for Appointment"

ಅದರಂತೆ ಉಲ್ಲೇಖ–13 ರನ್ವಯ ಹೊರಡಿಸಲಾದ ಕಾರ್ಯಕಾರಿ ಆದೇಶದಲ್ಲಿ ವಿಸ್ತರಿಸಲಾದ 6 ತಿಂಗಳ ಅವಧಿಯಂತೆ ಮತ್ತು ಉಲ್ಲೇಖ–14ರನ್ವಯ ಹೊರಡಿಸಲಾದ ಸರ್ಕಾರಿ ಆದೇಶದಲ್ಲಿ ವಿವರಿಸಿದಂತೆ ವಿದ್ಯಾರ್ಹತೆಯನ್ನು ಅನುಸರಿಸಿ, ಪ್ರಸ್ತುತ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ಆಯ್ಕೆ ಪ್ರಕ್ರಿಯೆಯನ್ನು ಮುಂದುವರೆಸುತ್ತಾ, ಆಂಗ್ಲಭಾಷಾ ಶಿಕ್ಷಕರ ಹುದ್ದೆಗೆ ಉಲ್ಲೇಖ–11ರಲ್ಲಿ ನಿಗದಿಪಡಿಸಲಾದ ವಿದ್ಯಾರ್ಹತೆಯನ್ನು, ಉಲ್ಲೇಖ–14ರನ್ವಯ ಆದೇಶಿಸಿದ ಅಂಶಗಳಂತೆ ತಿದ್ದುಪಡಿ ಮಾಡಿ ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ.

**ಹೆಚ್.ಬಿ. ಮಂಜುನಾಥ**
ಆಯ್ಕೆ ಪ್ರಾಧಿಕಾರಿಗಳು ಹಾಗೂ
ಉಪನಿರ್ದೇಶಕರು(ಆಡಳಿತ)
ಸಾರ್ವಜನಿಕ ಶಿಕ್ಷಣ ಇಲಾಖೆ
ಬೆಂಗಳೂರು ಉತ್ತರ.

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು.** (ಪಿಠ) (100 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ



| ಭಾಗ– V | ಬೆಂಗಳೂರು, ಗುರುವಾರ, ನವೆಂಬರ್ ೨೬, ೨೦೧೫ (ಮಾರ್ಗಶಿರ ೦೫, ಶಕ ವರ್ಷ ೧೯೩೭) | ನಂ. ೧೪೧೫ |
|---|---|---|
| *Part–V* | *Bengaluru, Thursday, November 26, 2015 (Margashira 05, Shaka Varsha 1937)* | *No. 1415* |



**ಸಾರ್ವಜನಿಕ ಶಿಕ್ಷಣ ಇಲಾಖೆ,**

**ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ, ಹಾಸನ ಜಿಲ್ಲೆ ಹಾಸನ**

**ಸಂಖ್ಯೆ: ಸಿ3[1]ಪ್ರಾಶಾ.ಶಿ:ನೇಮಕ:107/2014–15, ದಿನಾಂಕ: 26ನೇ ನವೆಂಬರ್ 2015**

**: ತಿದ್ದುಪಡಿ ನೇಮಕಾತಿ ಅಧಿಸೂಚನೆ :**

**ವಿಷಯ:** 2014–15ನೇ ಸಾಲಿನಲ್ಲಿ 1–5, ಹಾಗೂ 6–8ನೇ ತರಗತಿ ಸರ್ಕಾರಿ ಪ್ರಾಥಮಿಕ ಶಾಲಾ ಸಹಶಿಕ್ಷಕರ ಮತ್ತು ಸಹಶಿಕ್ಷಕಿ ವೃಂದದ ಹುದ್ದೆಗಳನ್ನು ನೇರ ನೇಮಕಾತಿಯಿಂದ ಜಿಲ್ಲಾ ಮಟ್ಟದ [ಸಂಯುಕ್ತ ಸ್ಪರ್ಧಾತ್ಮಕ] ಪರೀಕ್ಷೆಯ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** 1.ಸರ್ಕಾರದ ಅಧಿಕೃತ ಪ್ರಕಟಣೆ ಸಂ: ಡಿಪಿಎಆರ್:41:ಎಸ್‌ಆರ್‌ಇ:2001, ದಿನಾಂಕ:09.08.2001.

2] ಸರ್ಕಾರಿ ಆದೇಶ ಸಂ:ಸಿಆಸುಇ:08:ಸಹಿಮ:1995, ದಿನಾಂಕ:20.06.1995.

3] ಸರ್ಕಾರಿ ಆದೇಶ ಸಂ:ಸಿಆಸುಇ:97:ಸನೆನಿ:2002, ದಿನಾಂಕ:22.11.2002.

4] ಸರ್ಕಾರಿ ಆದೇಶ ಸಂ:ಸಿಆಸುಇ:53:ಸೇನೇನಿ:2007, ದಿನಾಂಕ:04.01.2008.

5] ಸರ್ಕಾರಿ ಆದೇಶ ಸಂ:ಇಡಿ:21:ಯೋಯೋಕ:2010, ದಿನಾಂಕ:02.11.2012.

6] ಸರ್ಕಾರಿ ಆದೇಶ ಸಂ:ಇಡಿ:238:ಪಿಬಿಐ:2012, ದಿನಾಂಕ:21.01.2013.

7] ಸರ್ಕಾರಿ ಆದೇಶ ಸಂ:ಸಿಆಸುಇ:50:ಎಸ್.ಆರ್.ಆರ್.:2007, ದಿನಾಂಕ:26.07.2011

8] ಸರ್ಕಾರಿ ಆದೇಶ ಸಂ :ಸಿಆಸುಇ:54:ಎಸ್.ಆರ್.ಆರ್.:2012,ದಿನಾಂಕ:07.08.2012

9] ಸರ್ಕಾರಿ ಆದೇಶ ಸಂ :ಸಿಆಸುಇ: 43: ಹೆಚ್‌ಕೆಸಿ 2013,ದಿನಾಂಕ:29.01.2014

10] ಸರ್ಕಾರಿ ಆದೇಶ ಸಂ : ಸಿಆಸುಇ 33 ಹೈಕಉ 2014,ದಿನಾಂಕ: 10.04.2014

11] ಸರ್ಕಾರಿ ಆದೇಶ ಸಂ:ಇಡಿ:626:ಪಿಬಿಎಸ್:2014, ದಿನಾಂಕ:31.01.2015

12] ಈ ಕಛೇರಿ ನೇಮಕಾತಿ ಅಧಿಸೂಚನೆ ಸಮ ಸಂಖ್ಯೆ ದಿನಾಂಕ:23.03.2015

13] ಸರ್ಕಾರದ ಆದೇಶ ಸಂಖ್ಯೆ : ಇಡಿ 626 ಪಿಬಿಎಸ್ 2014, ದಿನಾಂಕ: 21.11.2015.

14] ಸರ್ಕಾರದ ಆದೇಶ ಸಂಖ್ಯೆ :ಇಡಿ 626 ಪಿಬಿಎಸ್ 2014 ದಿನಾಂಕ:25.11.2015

15] ಆಯುಕ್ತರು, ಸಾಶಿಇ, ಬೆಂಗಳೂರು ಇವರ ಕಛೇರಿ ಪತ್ರ ಸಂಖ್ಯೆ : ಸಿ3(1) ಪ್ರಾಶಾಶಿ.ನೇ 02/2014–15 ದಿನಾಂಕ:25.11.2015

ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಪರೀಕ್ಷೆ ಮೂಲಕ ಅಂದರೆ ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ [ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್][ರೆಕ್ರೂಟ್‌ಮೆಂಟ್][ಅಮೆಂಡ್‌ಮೆಂಟ್]ರೂಲ್ಸ್–2001[ಸಂಖ್ಯೆ:ಡಿಪಿಎಆರ್:41:ಎಸ್‌ಆರ್‌ಇ:2001, ದಿನಾಂಕ:09.08.2001]ರ ಹಾಗೂ ಸರ್ಕಾರದ ಕಾರ್ಯಕಾರಿ ಆದೇಶ ಸಂಖ್ಯೆ: ಇಡಿ:626:ಪಿಬಿಎಸ್:2014, ದಿನಾಂಕ:31.01.2015ರ ನಿಯಮಗಳನ್ವಯ ಆಯ್ಕೆ ಮಾಡಲು ಉಲ್ಲೇಖ–12 ರನ್ವಯ ನೇಮಕಾತಿ ಅಧಿಸೂಚನೆಯನ್ನು ಹೊರಡಿಸಲಾಗಿತ್ತು.

ಸರ್ಕಾರದಿಂದ ಉಲ್ಲೇಖ–11 ರನ್ವಯ ಹೊರಡಿಸಲಾದ ಕಾರ್ಯಕಾರಿ ಆದೇಶದಲ್ಲಿ 6 ರಿಂದ 8ನೇ ತರಗತಿಯ ಆಂಗ್ಲ ಭಾಷಾ ಶಿಕ್ಷಕರ ಹುದ್ದೆಗೆ ನಿಗಧಿಪಡಿಸಲಾದ ಶೈಕ್ಷಣಿಕ ವಿದ್ಯಾರ್ಹತೆಯನ್ನು ಈ ಕೆಳಗಿನಂತೆ ನಿಗಧಿಪಡಿಸಲಾಗಿತ್ತು.

